

# ವಾಗ್ದಾನಗಳು

# 1000

ಜೆ.ಸ್ಯಾಮ್ ಜೆಬದುರ್ರೈ

## இயேசு கிறிஸ்துவின் நாமத்தில் அன்பின் வாழ்த்துக்கள்

ஏறக்குறைய 7 ஆண்டுகளாக பல இடங்களிலிருந்து சேகரித்த சுமார் 200 ஆண்டுகளுக்கு முன்பு வரை அச்சடிக்கப்பட்ட, ஆரோக்கிய உபதேசங்கள் அடங்கிய, கிறிஸ்தவ ஆவிக்குரிய புத்தகங்களை, பல மணி நேரம் கொடுத்து, பல இலட்சங்கள் செலவு செய்து மின் நூல்களாக *(E-Books)* இலவசமாக (மத்தேயு *10:8*) உங்கள் கரங்களில் கொடுப்பதற்கு, அற்பரும் நீசருமான எங்களை பயன்படுத்தின உன்னத தேவனுக்கே சகல கனமும் மகிமையும் துதியும் உரித்தாவதாக. இதைப் போன்ற இன்னும் ஆயிரக்கணக்கான புத்தகங்களை தரவிறக்கம் *(Download)* செய்ய எங்களுடைய இணையதளத்தை சொடுக்கவும்/பார்க்கவும்: *www.WordOfGod.in*

95 சதவீத புத்தகங்கள் அச்சில் இல்லாதவைகளும், காப்புரிமை முடிந்தவைகளுமே. மீதமுள்ள புத்தகங்கள், நல்ல உபதேசங்களை கொண்டிருப்பதால், முடிந்தவரை ஆசிரியரின் உரிமையோடு மின்-நூலாக, இலவசமாக வெளியிடுகிறோம். ஒருவேளை உங்களுடைய புத்தகம் இப்படி இலவசமாக மின்-நூல் *(E-Book)* வடிவில் வரக்கூடாது என்று நினைத்தீர்களானால், தயவு செய்து எங்களை மன்னித்துக்கொள்ளுங்கள். எங்களுடைய *WhatsApp* எண்ணிற்கோ, மின் அஞ்சலிலோ *(Email)* எங்களுக்கு தெரியப்படுத்துங்கள். உடனடியாக எங்களுடைய இணைய-தளத்திலிருந்து எடுத்துவிடுகிறோம்.

*WhatsApp/SMS: +91 90 190 490 70 / +91 7676 50 5599*

*Email: wordofgod@wordofgod.in*

## *Wishing you in the mighty name of Jesus Christ*

*We had collected several thousands of old Tamil Spiritual Books which are rich in Sound Doctrines across various places of India for 7 years. Some of them are more than 200 years old books. We have spent millions of hours and money in scanning them and coverting them to E-Books. The work is still in progress. These E-books are published completely free of cost (Matt 10:8) forever. We give all the praise and glory to God for giving this wonderful opportunity to server Him. You can download thousands of similar Tamil Christian E-books from our website www.WordOfGod.in completely free of cost at any time.*

*95% of these E-Books are not being printed now and their copyrights are already expired. The remaining books are sent as E-Books mostly with the permission from the Authors. If you feel that your books should not be published as E-Book freely, kindly execuse and forgive us. Please let us know the book details by WhatsApp or Email we will remove them from our website.*

*WhatsApp/SMS: +91 90 190 490 70 / +91 7676 50 5599*

*Email: wordofgod@wordofgod.in*

# ವಾಗ್ದಾನಗಳು ಸಾವಿರ

## (A THOUSAND PROMISES)

ಜೆ. ಸ್ಯಾಮ್ ಜೆಬದುರೈ



ಪ್ರಕಾಶಕರು :

ಸೆಲ್ವಿನ್ ಕ್ರಿಸ್ಟೋಫರ್ ಜಾರ್ಜ್

24ನೇ 'F' ಅಡ್ಡರಸ್ತೆ, ಈಜಿಪುರ,

ವಿವೇಕನಗರ, ಬೆಂಗಳೂರು – 560 047

ಮೊದಲನೆ ಮುದ್ರಣ : ಜನವರಿ 2002 Book No. : 86

ಕಾಣಿಕೆ - ರೂ. 10.00

*Translated by*

**MRS. SARAH JESUDOSS**

BANGALORE - 560 071

*Copies can be had from :*

SELVIN CHRISTOPHER GEORGE
24th 'F' Cross, Egipura, Viveknagar
Bangalore - 560 047
Phone : 080-25712448

# ವಿಷಯ ಸಂಗ್ರಹಣೆ.


1. ನಿನ್ನೊಂದಿಗಿರುವೆನು!
2. ಆಶೀರ್ವದಿಸುವೆನು!
3. ಕೋಟೆಯಾಗಿರುವ ದೇವರು!
4. ಬಲವುಳ್ಳ ಕರ್ತನು!
5. ಗುರಾಣಿಯಾದ ಯೆಹೋವನು!
6. ಆಶ್ರಯ ಗಿರಿಯಾದಾತನು!
7. ಆಶ್ರಯ ದುರ್ಗವಾದಾತನು!
8. ಮಹತ್ಕಾರ್ಯಗಳನ್ನು ನಡಿಸುವಾತನು!
9. ಜ್ಞಾನವನ್ನು ಕೊಡುವಾತನು!
10. ಅನುಗ್ರಹ!
11. ಆಲೋಚನೆ ಕೊಡುವಾತನು!
12. ಸಹಾಯ ಕೊಡುವ ದೇವರು!
13. ಅದ್ಭುತಗಳ ದೇವರು!
14. ಸಂತೈಸುವ ದೇವರು!
15. ರಕ್ಷಣಾ ಕರ್ತನು!
16. ವಿಶ್ರಾಂತಿಯನ್ನುಂಟು ಮಾಡುವ ಕರ್ತನು!
17. ದಯೆತೋರಿಸುವ ಯೆಹೋವನು!
18. ನಿತ್ಯಜೀವವನ್ನು ಕೊಡುವಾತನು!
19. ಬದುಕಿಸುವಾತನು!
20. ರಮ್ಯವಾದಾತನು!
21. ಐಶ್ವರ್ಯ!
22. ಹರ್ಷಗೊಳಿಸುವಾತನು!
23. ಸನ್ಮಾನ ಮಾಡುವನು!
24. ದೀನರ ರಕ್ಷಣಾ ಕರ್ತನು!
25. ಕರ್ತನು ನಂಬಿಗಸ್ತನು!
26. ಸೌಖ್ಯವನ್ನು ಅನುಗ್ರಹಿಸುವಾತನು!
27. ಸ್ಥಿರಪಡಿಸುವಾತನು!
28. ಸಹಾಯ ಮಾಡುವಾತನು!
29. ಅನಾದಿ ದೇವರು!
30. ಕೃಪಾಸಂಪನ್ನನು!
31. ಜಯಕೊಡುವಾತನು!
32. ಐಕ್ಯವಾಗಿರುವಾತನು!
33. ಕೊರತೆ ಇಲ್ಲ!
34. ದೇವ ಸನ್ನಿಧಿ!
35. ಸೌಭಾಗ್ಯವನ್ನು ಕೊಡುವಾತನು!
36. ನಿತ್ಯ ಒಡಂಬಡಿಕೆ!
37. ಕಾಪಾಡುವಾತನು!
38. ಯಥಾರ್ಥವಂತರಿಗೆ!
39. ಅಧೀನಪಡಿಸುವಾತನು!
40. ಸಹೋದರ ಸ್ನೇಹ!
41. ಹೊತ್ತುಕೊಳ್ಳುವಾತನು!
42. ಸುಗಂಧ!
43. ಕರ್ತನಲ್ಲಿ ಸುರಕ್ಷತೆ!
44. ಯೆಹೋವನಲ್ಲಿ ಆಸಕ್ತಿ!
45. ಪ್ರಕಟಪಡಿಸುತ್ತಾನೆ!
46. ನಿತ್ಯವಾದ ಆಶೀರ್ವಾದಗಳು!1
47. ನಿತ್ಯವಾದ ಆಶೀರ್ವಾದಗಳು!2
48. ಪ್ರಾರ್ಥನೆಯನ್ನು ಕೇಳುವಾತನು!

ವೆ


49. ಬಿತ್ತನೆಯ ಆಶೀರ್ವದಗಳು!
50. ಬೆಳಕಾಗಿರುವಾತನು!
51. ಸಫಲ ಪಡಿಸುವನು!
52. ವೃದ್ಧಿಯಾಗುವಿ!
53. ಯೌವನ!
54. ವಿವೇಕವನ್ನು ಕೊಡುವಾತನು!
55. ಮರುಭೂಮಿಯು ಫಲವತ್ತಾಗುವದು!
56. ಮಾರ್ಗ ನಡಿಸುವನು!
57. ಉದ್ಧೇಶಗಳು!
58. ಮುದ್ರೆ!
59. ವಾದ ಮಾಡುವನು!
60. ಯೆಹೋವನು ಶಕ್ತನು!
61. ನಿವಾಸಗಳು!
62. ಬಿಡುಗಡೆಮಾಡುವಾತನು!
63. ಮಹಿಮಾಬಲ!
64. ಬಾಯಿ!
65. ವಾಗ್ಧಾನಗಳು!
66. ವಾರ್ತೆ!
67. ನನ್ನ ಬಲಗಡೆ!
68. ವರಗಳನ್ನು ಅನುಗ್ರಹಿಸುವನು!
69. ಪ್ರಸನ್ನಮುಖದ ಆಶೀರ್ವಾದ!
70. ಉನ್ನತಸ್ಥಿತಿಗೆ ತರುವಾತನು!
71. ಮೇಘ ಸ್ತಂಭವಾದಾತನು!
72. ಮುಂದುಗಡೆ ಹೋಗುವಾತನು!
73. ಸಮಾಪ್ತಿಯವರೆಗೆ!
74. ಮುಂಗಾರು ಹಿಂಗಾರುಮಳೆ!
75. ಕರ್ತನ ಭುಜಬಲ!
76. ಕ್ಷಮಿಸುವಾತನು! ಭಾಗ 1
77. ಕ್ಷಮಿಸುವಾತನು! ಭಾಗ 2
78. ಕನಿಕರಿಸುವ ದೇವರು!
79. ಮನೋಲ್ಲಾಸ!
80. ಸದಾಚಾರ!
81. ಜಯ ಕೊಡುವಾತನು!
82. ಆಶ್ರಯಕೊಡುವಾತನು!
83. ಕನಿಕರವುಳ್ಳಾತನು!
84. ರಾಜ್ಯವನ್ನಾಗಿ ಮಾಡಿದನು!
85. ಕುರುಬನಾದಾತನು!
86. ಯುದ್ಧಮಾಡುವನು!
87. ಉತ್ಸಾಹ ಸ್ತೋತ್ರದ ವಸ್ತ್ರ!
88. ವಿಮೋಚಕನು!
89. ನೂತನಪಡಿಸುವಾತನು!
90. ಪರಿಶೋಧಿಸುವನು!
91. ಕರ್ತನಿಗೆ ಪ್ರಿಯವಾದದ್ದು!
92. ನಾಮ ಸ್ಮರಣೆ!
93. ಕೇಡು ಸಂಭವಿಸದು!
94. ಪ್ರಭಾವ!
95. ಕಷ್ಟಾರ್ಜಿತವನ್ನು ಅನುಭವಿಸುವಿ!
96. ವಿವೇಕವನ್ನು ಕೊಡುವನು!
97. ಸಂತೋಷವನ್ನು ಕೊಡುವನು!
98. ವ್ಯಾಧಿ ಉಂಟಾಗದಂತೆ ಮಾಡುವನು!
99. ಬಡತನ ನೀಗುವದು ಬಂಜರು ಭೂಮಿ ಫಲವತ್ತಾಗುವದು!
100. ಹೊಗಳಿಕೆ!

# 1. ನಿನ್ನೊಂದಿಗಿರುವೆನು!

1. "ನಿನ್ನ ಜೀವಮಾನದಲ್ಲೆಲ್ಲಾ ಒಬ್ಬನೂ ನಿನ್ನ ಮುಂದೆ ನಿಲ್ಲನು; ನಾನು ಮೋಶೆಯ ಸಂಗಡ ಇದ್ದ ಹಾಗೆ ನಿನ್ನ ಸಂಗಡಲೂ ಇರುವೆನು" (ಯೆಹೋ:1:5).

2. "ನಾನು ಇಂದಿನಿಂದ ನಿನ್ನನ್ನು ಇಸ್ರಾಯೇಲ್ಯರೆಲ್ಲರ ಮುಂದೆ ಘನಪಡಿಸುವೆನು; ನಾನು ಮೋಶೆಯ ಸಂಗಡ ಇದ್ದ ಹಾಗೆ ನಿನ್ನ ಸಂಗಡಲೂ ಇರುವೆನೆಂಬದು ಅವರಿಗೆ ಗೊತ್ತಾಗುವದು" (ಯೆಹೋ.3:7).

3. "ನೀನಂತು ಹೆದರಬೇಡ, ನಾನೇ ನಿನ್ನೊಂದಿಗಿದ್ದೇನೆ; ದಿಗ್ಭ್ರಮೆಗೊಳ್ಳದಿರು, ನಾನೇ ನಿನ್ನ ದೇವರು; ನಾನು ನಿನ್ನನ್ನು ಬಲಪಡಿಸುತ್ತೇನೆ; ಹೌದು, ನಿನಗೆ ಸಹಾಯ ಕೊಡುತ್ತೇನೆ; ನನ್ನ ಧರ್ಮದ ಬಲಗೈಯನ್ನು ನಿನಗೆ ಆಧಾರಮಾಡುತ್ತೇನೆ" (ಯೆಶಾ.41:10).

4. "ನಾನು ನಿನಗೆ ಆಜ್ಞಾಪಿಸಿದ್ದೇನಲ್ಲಾ; ಸ್ಥಿರಚಿತ್ತನಾಗಿರು; ಧೈರ್ಯದಿಂದಿರು, ಅಂಜಬೇಡ, ಕಳವಳಗೊಳ್ಳಬೇಡ. ನೀನು ಹೋಗುವಲ್ಲೆಲ್ಲಾ ನಿನ್ನ ದೇವರಾದ ಯೆಹೋವನು ನಿನ್ನ ಸಂಗಡ ಇರುತ್ತಾನೆ" (ಯೆಹೋ.1:9).

5. "ನೀವು ಅವರಿಗೆ ಹೆದರಿಕೊಳ್ಳಬೇಡಿರಿ; ನಿಮ್ಮ ದೇವರಾದ ಯೆಹೋವನು ನಿಮ್ಮ ಮಧ್ಯದಲ್ಲಿದ್ದಾನೆ; ಆತನು ಭಯಂಕರನಾದ ಮಹಾ ದೇವರು" (ಧರ್ಮೋ.7:21).

6. ''ನೀನು ಹೆದರಬೇಡ; ಸುಮ್ಮನಿರದೆ ಮಾತಾಡುತ್ತಲೇ ಇರು; ನಾನೇ ನಿನ್ನೊಂದಿಗೆದ್ದೇನೆ; ಯಾರೂ ನಿನ್ನ ಮೇಲೆ ಬಿದ್ದು ಕೇಡು ಮಾಡುವದಿಲ್ಲ'' (ಅಪೊ.18:9,10).

7. ''ಯೆಹೋವನು ತಾನೇ ನಿನ್ನ ಮುಂದುಗಡೆ ಹೋಗುವನು; ಆತನೇ ನಿನ್ನ ಸಂಗಡ ಇರುವನು; ನಿನ್ನನ್ನು ಅಪಯಶಕ್ಕೆ ಗುರಿಪಡಿಸುವದೇ ಇಲ್ಲ, ಕೈ ಬಿಡುವದಿಲ್ಲ; ಅಂಜಬೇಡ, ಧೈರ್ಯದಿಂದಿರು'' (ಧರ್ಮೋ.31:8).

8. ''ಬೆಟ್ಟಗಳು ಸ್ಥಳವನ್ನು ಬಿಟ್ಟುಹೋದಾವು, ಗುಡ್ಡಗಳು ಕದಲಿಯಾವು; ಆದರೆ ನನ್ನ ಕೃಪೆಯು ನಿನ್ನನ್ನು ಬಿಟ್ಟುಹೋಗದು; ಸಮಾಧಾನದ ನನ್ನ ಒಪ್ಪಂದವು ಕದಲವು ಎಂದು ನಿನ್ನನ್ನು ಕರುಣಿಸುವ ಯೆಹೋವನು ಅನ್ನುತ್ತಾನೆ'' (ಯೆಶಾ. 54:10).

9. ''ಸೇನಾಧೀಶ್ವರನಾದ ಯೆಹೋವನು ನಮ್ಮ ಸಂಗಡ ಇದ್ದಾನೆ; ಯಾಕೋಬವಂಶದವರ ದೇವರು ನಮಗೆ ಆಶ್ರಯ ದುರ್ಗವಾಗಿದ್ದಾನೆ'' (ಕೀರ್ತ.46:11).

10.''ನೋಡಿರಿ, ನಾನು ಯುಗದ ಸಮಾಪ್ತಿಯವರೆಗೂ ಎಲ್ಲಾ ದಿವಸ ನಿಮ್ಮ ಸಂಗಡ ಇರುತ್ತೇನೆ '' (ಮತ್ತಾಯ. 28:20).

## 2. ಆಶೀರ್ವದಿಸುವೆನು!

1. ''ನಾನು ನಿನ್ನನ್ನು ಆಶೀರ್ವದಿಸೇ ಆಶೀರ್ವದಿಸುವೆನು; ನಿನ್ನ ಸಂತತಿಯನ್ನು ಹೆಚ್ಚಿಸೇ ಹೆಚ್ಚಿಸುವೆನು; ಅದನ್ನು ಆಕಾಶದ

ನಕ್ಷತ್ರಗಳಂತೆಯೂ, ಸಮುದ್ರತೀರದಲ್ಲಿರುವ ಉಸುಬಿನಂತೆಯೂ ಅಸಂಖ್ಯವಾಗಿ ಮಾಡುವೆನು '' (ಆದಿ. 22:16,17).

2. ''ನಾನು ನಿನ್ನನ್ನು ದೊಡ್ಡ ಜನಾಂಗವಾಗುದಂತೆ ಮಾಡಿ ಆಶೀರ್ವದಿಸಿ ನಿನ್ನ ಹೆಸರನ್ನು ಪ್ರಖ್ಯಾತಿಗೆ ತರುವೆನು. ನೀನು ಆಶೀರ್ವಾದ ನಿಧಿಯಾಗುವಿ. ನಿನ್ನನ್ನು ಹರಸುವವರನ್ನು ಹರಸುವೆನು ; ನಿನ್ನನ್ನು ಶಪಿಸುವವರನ್ನು ಶಪಿಸುವೆನು ನಿನ್ನ ಮೂಲಕ ಭೂಲೋಕದ ಎಲ್ಲಾ ಕುಲದವರಿಗೂ ಆಶೀರ್ವಾದವುಂಟಾಗುವದು'' (ಆದಿ.12:2,3).

3. ''ನೀವು ಕೆಲಸಕ್ಕೆ ಹೋಗುವಾಗಲೂ ಬರುವಾಗಲೂ ಶುಭವುಂಟಾಗುವದು'' (ಧರ್ಮೋ.28:6).

4. ''ನಾನು ಅವರನ್ನೂ ನನ್ನ ಪರ್ವತದ ಸುತ್ತಣ ಪ್ರದೇಶಗಳನ್ನೂ ಆಶೀರ್ವದಿಸಿ ಸುಖಪಡಿಸುವೆನು; ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸುವೆನು; ಶುಭದಾಯಕ ವೃಷ್ಟಿಯು ಆಗುವುದು'' (ಯೆಹೆ.34:26).

5. ''ನಾನು ಪರಲೋಕದ ದ್ವಾರಗಳನ್ನು ತೆರೆದು ನಿಮ್ಮಲ್ಲಿ ಸ್ಥಳಹಿಡಿಸಲಾಗದಷ್ಟು ಸುವರವನ್ನು ಸುರಿಯುವೆನೋ ಇಲ್ಲವೋ ನನ್ನನ್ನು ಹೀಗೆ ಪರೀಕ್ಷಿಸಿರಿ.'' (ಮಲಾ. 3:10).

6. ''ಚೀಯೋನಿನಲ್ಲಿರುವ ಯೆಹೋವನು ನಿನ್ನನ್ನು ಆಶೀರ್ವದಿಸಲಿ; ಜೀವಮಾನವೆಲ್ಲಾ ಯೆರೂಸಲೇಮಿನ ಸೌಭಾಗ್ಯ

ವನ್ನು ನೋಡುವವನಾಗು. ಮಕ್ಕಳ ಮಕ್ಕಳನ್ನು ಕಾಣುವವನಾಗು. ಇಸ್ರಾಯೇಲ್ಯರಿಗೆ ಶುಭವಾಗಲಿ'' (ಕೀರ್ತ.128 5,6).

7. ''ಈಗ ನೀನು ನಿನ್ನ ಸೇವಕನ ಮನೆಯನ್ನು ಆಶೀರ್ವದಿಸಿದ್ದೀ; ಅದು ನಿತ್ಯವೂ ಸೌಭಾಗ್ಯದಿಂದಿರುವದು'' (1ಪೂರ್ವ.ವೃ.17:27).

8. ''ಯೆಹೋವನೇ, ನಿನ್ನ ಜನರನ್ನು ರಕ್ಷಿಸು; ನಿನ್ನ ಸ್ವಕೀಯ ಪ್ರಜೆಯನ್ನು ಆಶೀರ್ವದಿಸು. ಅವರನ್ನು ಯಾವಾಗಲೂ ಪರಿಪಾಲಿಸುತ್ತಾ ಆಧಾರವಾಗಿರು.'' (ಕೀರ್ತ 28.9).

9. ''ಯೆಹೋವನು ನಮ್ಮನ್ನು ನೆನಪು ಮಾಡಿಕೊಂಡಿದ್ದಾನೆ; ಸಣ್ಣವರು ಮೊದಲುಗೊಂಡು ದೊಡ್ಡವರ ಪರ್ಯಂತರ ಎಲ್ಲರನ್ನೂ ಆಶೀರ್ವದಿಸುವನು'' (ಕೀರ್ತ.115.12).

10 ''ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ ತಂದೆಯೂ ಆಗಿರುವಾತನಿಗೆ ಸ್ತೋತ್ರ. ಆತನು ಪರಲೋಕದಲ್ಲಿ ಸಕಲ ಆತ್ಮೀಕ ವರಗಳನ್ನು ನಮಗೆ ಕ್ರಿಸ್ತಯೇಸುವಿನಲ್ಲಿ ಅನುಗ್ರಹಿಸಿದ್ದಾನೆ'' (ಎಫೆ.1:3).

## 3. ಕೋಟೆಯಾಗಿರುವ ದೇವರು!

1. ''ದೇವರು ನನ್ನ ಬಲವಾದ ಕೋಟೆಯಾಗಿದ್ದಾನೆ; ಆತನು ನನ್ನ ಮಾರ್ಗವನ್ನು ಸರಾಗಮಾಡುತ್ತಾನೆ'' (2 ಸಮು.22:33).

2. ''ಯೆಹೋವನು ಒಳ್ಳೆಯವನು; ಇಕ್ಕಟ್ಟಿನ ದಿನದಲ್ಲಿ ಆಶ್ರಯದುರ್ಗವಾಗಿದ್ದಾನೆ; ತನ್ನ ಮರೆಹೊಕ್ಕವರನ್ನು ಬಲ್ಲನು'' (ನಹೂ.1:7).

3. “ಸುನಿರೀಕ್ಷೆಯುಂಟಾದ ಸೆರೆಯವರೇ, ನಿಮ್ಮ ದುರ್ಗಕ್ಕೆ ಹಿಂದಿರುಗಿರಿ; ನಿಮಗೆ ಎರಡರಷ್ಟು (ಸುಖವನ್ನು) ದಯಪಾಲಿಸುವೆನು” (ಜೆಕರ್ಯ.9:12).

4. “ಇವನಿಗೆ ಆಶ್ರಯವು ಗಿರಿದುರ್ಗ, ಅನ್ನವು ಉಚಿತವಾಗಿ ಒದಗುವದು, ನೀರೂ ನಿಸ್ಸಂದೇಹ” (ಯೆಶಾ.33:16).

5. “ಆ ದಿವಸದಲ್ಲಿ ಯೆಹೂದ ದೇಶದೊಳಗೆ ಈ ಗೀತವನ್ನು ಹಾಡುವರು ನಮಗೆ ಬಲವಾದ ಪಟ್ಟಣವಿದೆ. (ಯೆಹೋವನು ತನ್ನ) ರಕ್ಷಣೆಯನ್ನು ಕೋಟೆಯನ್ನಾಗಿಯೂ ಹೊರಪೌಳಿಯನ್ನಾಗಿಯೂ ಮಾಡಿದ್ದಾನೆ. (ಯೆಶಾ.26;1).

6. “ಶತ್ರುಗಳು ನನಗೆ ರಹಸ್ಯವಾಗಿ ಒಡ್ಡಿದ ಬಲೆಯೊಳಗೆ ಸಿಕ್ಕಿ ಬೀಳದಂತೆ ನನ್ನನ್ನು ಕಾಪಾಡು;” (ಕೀರ್ತ.31:4).

7. “ಯೆಹೋವನು ಸನ್ಮಾರ್ಗಿಗೆ ಆಶ್ರಯ; ಕೆಡುಕನಿಗೆ ನಾಶನ” (ಜ್ಞಾನೊ.10:29).

8. “ನಾನು ನಿನ್ನನ್ನು ನನ್ನ ಜನವೆಂಬ ಅವರಿಗೆ ಶೋಧಕನನ್ನಾಗಿ ನೇಮಿಸಿದ್ದೇನೆ; ನೀನು ಅವರ ನಡತೆಯನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕು” (ಯೆರೆ. 6:27).

9. “ಹಿಂಡಿಗೆ ರಕ್ಷಕವಾದ ಹೂಡೆಯೇ, ಚೀಯೋನ್ ಯುವತಿಯ ಗುಡ್ಡವೇ, ನಿನ್ನ ಹಿಂದಿನ ಆಡಳಿತವು ನಿನಗೆ ದೊರೆಯುವದು, ಯೆರುಸಲೇಮ್ ಪುರಿಯ ರಾಜ್ಯಾಧಿಕಾರವು ನಿನಗೆ ಲಭಿಸುವದು.” (ಮೀಕ.4;8).

10.“ ದೇವರೇ, ನೀನು ನನಗೆ ದುರ್ಗಸ್ಥಾನವಲ್ಲವೇ; ಯಾಕೆ ನನ್ನನ್ನು ತಳ್ಳಿಬಿಟ್ಟೆ? ನಾನು ಯಾಕೆ ಶತ್ರುಬಾಧೆಯಿಂದ ದುಃಖಿಸುತ್ತಾ ವಿಕಾರಿಯಾಗಿ ಅಲೆಯಬೇಕೆ ?” (ಕೀರ್ತ. 43:2).

## 4. ಬಲವುಳ್ಳ ಕರ್ತನು!

1. “ನನಗೆ ಶೌರ್ಯವೆಂಬ ನಡುಕಟ್ಟನ್ನು ಬಿಗಿಯುವವನೂ ನನ್ನ ಮಾರ್ಗವನ್ನು ಸರಾಗಮಾಡುವವನೂ ಆತನೇ”. (ಕೀರ್ತ.18:32).

2. “ಸೋತವನಿಗೆ ತ್ರಾಣವನ್ನು ಅನುಗ್ರಹಿಸಿ ನಿರ್ಬಲನಿಗೆ ಬಹು ಬಲವನ್ನು ದಯಪಾಲಿಸುತ್ತಾನೆ” (ಯೆಶಾ. 40:29).

3. “ನೀನು ನನಗೆ ಯುದ್ಧಕ್ಕಾಗಿ ಶೌರ್ಯವೆಂಬ ನಡುಕಟ್ಟನ್ನು ಬಿಗಿದಿದ್ದೀ; ಎದುರಾಳಿಗಳನ್ನು ಕುಗ್ಗಿಸಿ ನನಗೆ ಆಧೀನಮಾಡಿದ್ದೀ”. (ಕೀರ್ತ.18:39).

4. “ಯೆಹೋವನು ನನಗೆ ಬಲವೂ ಗುರಾಣಿಯೂ ಆಗಿದ್ದಾನೆ; ನಾನು ಆತನಲ್ಲಿ ಭರವಸವಿಟ್ಟೆನು, ನನಗೆ ಸಹಾಯವು ಉಂಟಾಯಿತು. ಆದಕಾರಣ ನನ್ನ ಹೃದಯವು ಹರ್ಷಿಸುವದು; ಕೀರ್ತನಾ ರೂಪವಾಗಿ ಆತನನ್ನು ಸ್ತುತಿಸುವೆನು”. (ಕೀರ್ತ. 28:7).

5. “ಯೆಹೋವನು ತನ್ನ ಜನರಿಗೆ ಬಲವನ್ನು ಅನುಗ್ರಹಿಸುವನು; ಆತನು ತನ್ನ ಪ್ರಜೆಗೆ ಸುಕ್ಷೇಮವನ್ನು ದಯಪಾಲಿಸುವನು” (ಕೀರ್ತ.29:11).

6. “ದೇವರು ನಮಗೆ ಆಶ್ರಯದುರ್ಗವಾಗಿದ್ದಾನೆ; ಆತನು ಇಕ್ಕಟ್ಟಿನಲ್ಲಿ ನಮಗೆ ವಿಶೇಷ ಸಹಾಯಕನು”. (ಕೀರ್ತ.46:1).

7. “ನನ್ನ ಬಲವೇ ನಿನ್ನನ್ನು ಹಾಡಿಹರಸುವೆನು. ನನ್ನ ಆಶ್ರಯದುರ್ಗ ಕೃಪಾನಿಧಿಯೂ ದೇವರೇ” (ಕೀರ್ತ.59:17).

8. “ಯೆಹೋವನನ್ನು ನಿರೀಕ್ಷಿಸುವವರೋ ಹೊಸ ಬಲವನ್ನು ಹೊಂದುವರು; ಹದ್ದುಗಳಂತೆ ರೆಕ್ಕೆಗಳನ್ನು ಚಾಚಿಕೊಂಡು ಏರುವರು; ಓಡಿದಣಿಯರು, ನಡೆದು ಬಳಲರು” (ಯೆಶಾ.40:31).

9. “ಕರ್ತನಾದ ಯೆಹೋವನೇ ನನ್ನ ಬಲ; ಆತನು ನನ್ನ ಕಾಲನ್ನು ಜಿಂಕೆಯ ಕಾಲಿನಂತೆ ಚುರುಕುಮಾಡಿ ನನ್ನ ಉನ್ನತ ಪ್ರದೇಶಗಳಲ್ಲಿ ನನ್ನನ್ನು ನಡಿಸುತ್ತಾನೆ.” (ಹಬ.3:19).

10. “ಸಿಂಹಗಳ ಬಾಯಿ ಕಟ್ಟಿದರು; ಬೆಂಕಿಯ ಬಲವನ್ನು ಆರಿಸಿದರು ಕತ್ತಿಯ ಬಾಯಿಗೆ ತಪ್ಪಿಸಿಕೊಂಡರು; ನಿರ್ಬಲರಾಗಿದ್ದು ಬಲಿಷ್ಠರಾದರು; ಯುದ್ಧದಲ್ಲಿ ಪರಾಕ್ರಮಶಾಲಿಗಳಾದರು; ಪರರ ದಂಡುಗಳನ್ನು ಓಡಿಸಿಬಿಟ್ಟರು”. (ಇಬ್ರಿ.11:34).

## 5. ಗುರಾಣಿಯಾದ ಯೆಹೋವನು!

1. “ಭಯಪಡಬೇಡ, ನಾನು ನಿನಗೆ ಗುರಾಣಿಯಾಗಿದ್ದೇನೆ, ನಿನಗೋಸ್ಕರ ಅತ್ಯಧಿಕ ಬಹುಮಾನವು ಇಟ್ಟದೆ” (ಆದಿ.15:1).

2. “ಇಸ್ರಾಯೇಲ್ಯರೇ ನೀವು ಎಷ್ಟೋ ಧನ್ಯರು; ನಿಮ್ಮಷ್ಟು ಭಾಗ್ಯವಂತರು ಯಾರಿದ್ದಾರೆ? ನೀವು ಯೆಹೋವನ ಅನುಗ್ರಹದಿಂದ ಜಯವನ್ನು ಹೊಂದಿದವರು. ಆತನೇ ನಿಮ್ಮನ್ನು ಕಾಯುವ ಢಾಲೂ ನಿಮ್ಮ ಗೌರವವನ್ನು ಕಾಪಾಡುವ ಕತ್ತಿಯೂ ಆಗಿದ್ದಾನೆ. ಆದದರಿಂದ ನಿಮ್ಮ ಶತ್ರಗಳು ನಿಮ್ಮ ಮುಂದೆ ಮುದುರಿಕೊಳ್ಳುತ್ತಾರೆ; ನೀವೋ.

ಅವರಿಗಿದ್ದ ಎತ್ತರವಾದ ಸೀಮೆಯಲ್ಲಿ ಜಯಶಾಲಿಗಳಾಗಿ ಸಂಚರಿಸುತ್ತೀರಿ'' (ಧರ್ಮೋ.33:29).

3. ''ದೇವರ ಮಾರ್ಗವು ಯಾವ ದೋಷವೂ ಇಲ್ಲದ್ದು; ಕರ್ತನ ವಚನವು ಶುದ್ಧವಾದದ್ದು; ಆತನು ಆಶ್ರಿತರೆಲ್ಲರಿಗೆ ಗುರಾಣಿ ಯಾಗಿದ್ದಾನೆ.'' (2 ಸಮು.22:31).

4. '' ನೀನೇ ನನಗೋಸ್ಕರ ಗುರಾಣಿಯನ್ನು ಹಿಡಿದು ರಕ್ಷಿಸಿದ್ದೀ; ನಿನ್ನ ಕೃಪಾಕಟಾಕ್ಷವು ನಿನಗೆ ದೊಡ್ಡಸ್ತಿಕೆಯನ್ನು ಉಂಟುಮಾಡಿದೆ.'' (2 ಸಮು.22:36).

5. ''ಆದರೂ ಯೆಹೋವನೇ, ನೀನು ನನ್ನನ್ನು ಕಾಯುವ ಗುರಾಣಿ; ನೀನು ನನ್ನ ಗೌರವಕ್ಕೆ ಆಧಾರನೂ ನನ್ನ ತಲೆಯನ್ನು ಎತ್ತುವಂತೆ ಮಾಡುವವನೂ ಆಗಿದ್ದೀ''.(ಕೀರ್ತ.3:3).

6. ''ಆದಕಾರಣ ನಿನ್ನನ್ನು ಮರೆಹೊಕ್ಕವರೆಲ್ಲರು ಸಂತೋಷ ಪಡುವರು; ನೀನು ಕಾಪಾಡುವವನೆಂದು ಅವರು ಯಾವಾಗಲೂ ಆನಂದ ಧ್ವನಿ ಮಾಡುವರು. ನಿನ್ನ ನಾಮವನ್ನು ಪ್ರೀತಿಸುವವರು ನಿನ್ನಲ್ಲಿ ಉಲ್ಲಾಸ ಗೊಳ್ಳುವರು.'' (ಕೀರ್ತ.5:12).

7. ''ಯೆಹೋವನು ನನಗೆ ಬಲವೂ ಗುರಾಣಿಯೂ ಆಗಿದ್ದಾನೆ; ನಾನು ಆತನಲ್ಲಿ ಭರವಸವಿಟ್ಟೆನು, ನನಗೆ ಸಹಾಯವು ಉಂಟಾಯಿತು. ಆದಕಾರಣ, ನನ್ನ ಹೃದಯವು ಹರ್ಷಿಸುವದು; ಕೀರ್ತನಾ ರೂಪವಾಗಿ ಆತನನ್ನು ಸ್ತುತಿಸುವೆನು.'' (ಕೀರ್ತ.28:7).

8. "ಯೆಹೋವ ದೇವರು ಸೂರ್ಯನೂ ಗುರಾಣಿಯೂ ಆಗಿದ್ದಾನಲ್ಲಾ. ಯೆಹೋವನು ಕೃಪೆಯನ್ನು ಘನವನ್ನೂ ಅನುಗ್ರಹಿಸುವನು; ಆತನು ಸದ್ಭಕ್ತರಿಗೆ ಯಾವ ಶುಭವನ್ನು ದಯಪಾಲಿಸದೆ ಇದ್ದಾನು?" (ಕೀರ್ತ.84:11).

9. "ಆತನು ನಿನ್ನನ್ನು ತನ್ನ ರೆಕ್ಕೆಗಳಿಂದ ಹೊದಗಿಸುವನು; ಆತನ ಪಕ್ಕಗಳ ಮರೆಯನ್ನು ಆಶ್ರಯಿಸಿಕೊಳ್ಳುವಿ. ಆತನ ಸತ್ಯತೆಯೇ ನಿನಗೆ ಖೇಡ್ಯವೂ ಗುರಾಣಿಯೂ ಆಗಿದೆ." (ಕೀರ್ತ.91:4).

10."...ಮತ್ತು ನಂಬಿಕೆಯೆಂಬ ಗುರಾಣಿಯನ್ನು ಹಿಡುಕೊಳ್ಳಿರಿ; ಆದದರಿಂದ ನೀವು ಕೆಡುಕನ ಅಗ್ನಿ ಬಾಣಗಳನ್ನೆಲ್ಲಾ ಆರಿಸುವದಕ್ಕೆ ಶಕ್ತರಾಗುವಿರಿ." (ಎಫೆ.6:16).

## 6. ಆಶ್ರಯ ಗಿರಿಯಾದಾತನು!

1. "ಯೆಹೋವನು ನನ್ನ ಬಂಡೆಯೂ ನನ್ನ ಕೋಟೆಯೂ, ನನ್ನ ವಿಮೋಚಕನೂ, ನನ್ನ ದೇವರೂ ನನ್ನ ಆಶ್ರಯಗಿರಿಯೂ ನನ್ನ ಗುರಾಣಿಯೂ ನನ್ನ ರಕ್ಷಣೆಯ ಕೊಂಬೂ ನನ್ನ ದುರ್ಗವೂ ಆಗಿದ್ದಾನೆ." (ಕೀರ್ತ.18:2).

2. "ನೀನೇ ನನ್ನ ಬಂಡೆಯೂ ಕೋಟೆಯೂ ಆಗಿದ್ದೀಯಲ್ಲಾ; ಆದದರಿಂದ ನಿನ್ನ ಹೆಸರಿನ ನಿಮಿತ್ತ ದಾರಿ ತೋರಿಸಿ ನನ್ನನ್ನು ನಡಿಸು." (ಕೀರ್ತ.31:3).

3. "ನಾನು ಯಾವಾಗಲೂ ಮರೆಹೋಗುವ ಆಶ್ರಯಗಿರಿ ಯಾಗಿರು; ನನ್ನ ರಕ್ಷಣೆಗೋಸ್ಕರ ಆಜ್ಞಾಪಿಸಿದ್ದೀಯಲ್ಲವೇ. ನೀನೇ

ನನ್ನ ಬಂಡೆಯೂ ಕೋಟೆಯೂ ಆಗಿದ್ದೀಯಲ್ಲಾ." (ಕೀರ್ತ.71:3).

4. "ಅಪಾಯಕಾಲದಲ್ಲಿ ಆತನು ನನ್ನನ್ನು ಗುಪ್ತ ಸ್ಥಳದಲ್ಲಿ ಅಡಗಿಸುವನು; ತನ್ನ ಗುಡಾರವೆಂಬ ಆಶ್ರಯಸ್ಥಾನದಲ್ಲಿ ನನ್ನನ್ನು ಭದ್ರಪಡಿಸುವನು; ಪರ್ವತಾಗ್ರದಲ್ಲಿ ನನನ್ನನ್ನು ಸುರಕ್ಷಿತವಾಗಿ ಇರಿಸುವನು." (ಕೀರ್ತ.27:5).

5. "ನಾನು ಎದೆಗುಂದಿದವನಾಗಿ ಭೂಮಿಯ ಕಡೇ ಭಾಗದಿಂದ ನಿನಗೆ ಮೊರೆಯಿಡುತ್ತೇನೆ; ನಾನು ಹತ್ತಲಾರದ ಆಶ್ರಯಗಿರಿಯ ಮೇಲೆ ನನ್ನನ್ನು ಹತ್ತಿಸು." (ಕೀರ್ತ.61:2).

6. "ನನ್ನ ರಕ್ಷಣೆಗೂ ಮಾನಕ್ಕೂ ದೇವರೇ ಆಧಾರ; ನನಗೆ ಬಲವಾದ ದುರ್ಗವೂ ಆಶ್ರಯುವೂ ದೇವರಲ್ಲಿಯೇ." (ಕೀರ್ತ.62:7).

7. "ನಾನು ಅವರಿಗೆ ಶ್ರೇಷ್ಠವಾದ ಗೋದಿಯನ್ನು ಊಟಕ್ಕೆ ಕೊಟ್ಟು ಬಂಡೆಯೊಳಗಿನ ಜೇನಿನಿಂದ ತೃಪ್ತಿಪಡಿಸುವೆನು." (ಕೀರ್ತ.81:16).

8. "ಇವನಿಗೆ ಆಶ್ರಯವು ಗಿರಿದುರ್ಗ; ಅನ್ನವು ಉಚಿತವಾಗಿ ಒದಗುವದು, ನೀರೂ ನಿಸ್ಸಂದೇಹ" (ಯೆಶಾ.33:16).

9. "ಅವರೆಲ್ಲರೂ ದೈವಿಕವಾದ ಒಂದೇ ನೀರನ್ನು ಕುಡಿದರು; ಹೇಗಂದರೆ ಅವರ ಹಿಂದೆ ಹೋಗುತ್ತಿದ್ದ ದೈವಿಕವಾದ ಬಂಡೆಯೊಳಗಿಂದ ಬಂದ ನೀರನ್ನು ಕುಡಿಯುತ್ತಿದ್ದರು; ಆ ಬಂಡೆ ಕ್ರಿಸ್ತನೇ." (1 ಕೊರಿ.10:4).

10.“ನಾನು ಯಾವಾಗಲೂ ಮರೆಹೋಗುವ ಆಶ್ರಯಗಿರಿಯಾಗಿರು, ... ನೀನೇ ನನ್ನ ಬಂಡೆಯೂ ಕೋಟೆಯೂ ಆಗಿದ್ದಿಯಲ್ಲಾ.” (ಕೀರ್ತ.71:3).

## 7. ಆಶ್ರಯ ದುರ್ಗವಾದಾತನು!

1. “ದೇವರು ನಮಗೆ ಆಶ್ರಯದುರ್ಗವಾಗಿದ್ದಾನೆ; ಆತನು ಇಕ್ಕಟ್ಟಿನಲ್ಲಿ ನಮಗೆ ವಿಶೇಷಸಹಾಯಕನು.” (ಕೀರ್ತ.46:1).

2. “ಯೆಹೋವನೇ, ತಲತಲಾಂತರಗಳಿಂದಲೂ ನಮ್ಮ ವಾಸ ಸ್ಥಾನವು ನೀನೇ” (ಕೀರ್ತ.90:1).

3. “ಯೆಹೋವನೇ, ನಾನು ನಿನಗೆ - ನೀನೇ ನನ್ನ ಶರಣನೂ ಜೀವಲೋಕದಲ್ಲಿ ನನ್ನ ಪಾಲೂ ಆಗಿದ್ದೀ ಎಂದು ಕೂಗಿ ಮೊರೆಯಿಟ್ಟಿದ್ದೇನೆ.” (ಕೀರ್ತ.142:5).

4. “ನೀನು ದೀನರಿಗೆ ಕೋಟೆ, ಇಕ್ಕಟ್ಟಿನಲ್ಲಿ ದರಿದ್ರರಿಗೆ ರಕ್ಷಣಾ ದುರ್ಗ, ಬಿಸಿಲಿಗೆ ನೆರಳು, ಭೀಕರ ಶ್ವಾಸವು ಗೋಡೆಗೆ ಬಡಿದು ಬಿಡುವ ಬಿರುಗಾಳಿಯಂತಿರುವಾಗ ಆಶ್ರಯವು ಆಗಿದ್ದೀ.” (ಯೆಶಾ.25:4).

5. “ಆದಿಯಿಂದಲೂ ದೇವರೇ ನಿಮಗೆ ನಿವಾಸಸ್ಥಾನ ವಾಗಿದ್ದಾನಲ್ಲ; ಸದಾದೇವರ ಹಸ್ತವೇ ನಿಮಗೆ ಆಧಾರ.” (ಧರ್ಮೋ.33:27).

6. “ನನ್ನ ರಕ್ಷಣೆಗೂ ಮಾನಕ್ಕೂ ದೇವರೇ ಆಧಾರ; ನನಗೆ ಬಲ ವಾದ ದುರ್ಗವೂ ಆಶ್ರಯವೂ ದೇವರಲ್ಲಿಯೇ.” (ಕೀರ್ತ.62:7).

7. “ನಾನಾದರೋ, ಇಕ್ಕಟ್ಟಿನ ಕಾಲದಲ್ಲಿ ಆಶ್ರಯವೂ ದುರ್ಗವೂ ಆಗಿರುವ ನಿನ್ನ ಬಲವನ್ನು ಹಾಡಿ ಹೊಗಳುವೆನು; ಪ್ರಾತಃಕಾಲದಲ್ಲಿ ನಿನ್ನ ಪ್ರೇಮವನ್ನು ಉಲ್ಲಾಸದಿಂದ ಕೊಂಡಾಡುವೆನು” (ಕೀರ್ತ.59:16).

8. “ನಾನು ಯೆಹೋವನಿಗೆ ನೀನೇ ನನ್ನ ಶರಣನು ನನ್ನ ದುರ್ಗವು ನಾನು ಭರವಸವಿಟ್ಟಿರುವ ನನ್ನ ದೇವರು ಎಂದು ಹೇಳುವೆನು.” (ಕೀರ್ತ.91:2).

9. “ಯೆಹೋವನೇ ನನ್ನ ಶರಣನು! ಪರಾತ್ಪರನನ್ನು ನಿವಾಸಸ್ಥಾನ ಮಾಡಿಕೊಂಡಿದ್ದೀಯಲ್ಲಾ, ಯಾವ ಕೇಡೂ ನಿನಗೆ ಸಂಭವಿಸದು; ಉಪದ್ರವವು ನಿನ್ನ ಗುಡಾರದ ಸಮೀಪಕ್ಕೂ ಬಾರದು.” (ಕೀರ್ತ.91:9,10).

10. “ಯೆಹೋವನಿಗೆ ಭಯಪಡುವದರಿಂದ ಕೇವಲ ನಿರ್ಭಯ; ಆತನ ಮಕ್ಕಳಿಗೆ ಆಶ್ರಯವಿದ್ದೇ ಇರುವದು.”(ಜ್ಞಾನೋ.14:26).

## 8. ಮಹತ್ಕಾರ್ಯಗಳನ್ನು ನಡಿಸುವಾತನು!

1. “ನೀನು ಐಗುಪ್ತ ದೇಶದೊಳಗಿಂದ ಪಾರಾಗಿ ಬಂದ ಕಾಲದಲ್ಲಿ ನಾನು ತೋರಿಸಿದಂತೆ ಅದ್ಭುತಗಳನ್ನು ತೋರಿಸುವೆನು.” (ಮೀಕ.7:15).

2. “ನಾನು ಒಂದು ನಿಬಂಧನವನ್ನು ಸ್ಥಾಪಿಸುತ್ತೇನೆ, ಕೇಳು: ಲೋಕದಲ್ಲಿ ಎಲ್ಲಿಯೂ ಯಾವ ಜನಾಂಗದಲ್ಲಿಯಾದರೂ ನಡೆಯದಂಥ ಮಹತ್ಕಾರ್ಯಗಳನ್ನು ನಿನ್ನ ಜನರೆಲ್ಲರೂ ನೋಡುವಂತೆ

ನಡಿಸುವೆನು. ನಿಮ್ಮ ಸುತ್ತಮುತ್ತಲಿರುವ ಎಲ್ಲಾ ಜನರೂ ಯೆಹೋವನು ಮಾಡುವ ಮಹತ್ಕಾರ್ಯವನ್ನು ನೋಡುವರು. ನಾನು ನಿಮ್ಮ ವಿಷಯದಲ್ಲಿ ಮಾಡಬೇಕೆಂದಿರು ವದು ಭಯಂಕರವಾದದ್ದು." (ವಿಮೋ.34:10).

3. "ಆತನು ಅಪ್ರಮೇಯ ಮಹಾಕಾರ್ಯಗಳನ್ನೂ ಅಸಂಖ್ಯವಾದ ಅದ್ಭುತಕೃತ್ಯಗಳನ್ನೂ ಮಾಡುತ್ತಾನೆ." (ಯೋಬ.5:9).

4. "ಯೆಹೋವನೇ, ನನ್ನ ದೇವರೇ, ನಿನಗೆ ಸಮಾನನಾದ ದೇವರು ಯಾರು? ನಮ್ಮ ಹಿತಕ್ಕಾಗಿ ನೀನು ಮಾಡಿದ ಆಲೋಚನೆಗಳೂ ಅದ್ಭುತಕಾರ್ಯಗಳೂ ಎಷ್ಟೋ ವಿಶೇಷವಾಗಿದೆ; ಅವುಗಳನ್ನು ವಿವರಿಸಿ ಹೇಳೋಣವೆಂದರೆ ಅಸಾಧ್ಯವು; ಅವು ಅಸಂಖ್ಯಾತವು." (ಕೀರ್ತ.40:5).

5. "ಮಹತ್ಕಾರ್ಯಗಳನ್ನು ನಡಿಸುವದರಲ್ಲಿ ಅದ್ವಿತೀಯನೂ ಇಸ್ರಾಯೇಲ್ಯರ ದೇವರೂ ಆದ ಯೆಹೋವ ದೇವರಿಗೆ ಸ್ತೋತ್ರವು" (ಕೀರ್ತ.72:18).

6. "ಯೆಹೋವನ ಕೃತ್ಯಗಳನ್ನು ವರ್ಣಿಸುವೆನು; ಪೂರ್ವದಿಂದ ನೀನು ನಡಿಸಿದ ಅದ್ಭುತಗಳನ್ನು ನೆನಪು ಮಾಡಿಕೊಳ್ಳುವೆನು." (ಕೀರ್ತ:77:11).

7. "ಅದ್ಭುತಗಳನ್ನು ನಡಿಸುವ ದೇವರು ನೀನೇ; ಜನಾಂಗಗಳಲ್ಲಿ ಪರಾಕ್ರಮವನ್ನು ತೋರ್ಪಡಿಸಿದಿ." (ಕೀರ್ತ.77:14)

8. ''ಯೆಹೋವನೇ, ಗಗನವು ನಿನ್ನ ಮಹತ್ತನ್ನು ಪ್ರಸಿದ್ಧ ಪಡಿಸುವದು; ನಿನ್ನ ಸತ್ಯತೆಯನ್ನು ಪರಿಶುದ್ಧರ ಸಭೆಯಲ್ಲಿ ಕೀರ್ತಿಸುವದು.'' (ಕೀರ್ತ.89:5).

9. ''ಯೆಹೋವನಿಗೆ ಹೊಸ ಕೀರ್ತನೆಯನ್ನು ಹಾಡಿರಿ; ಆತನ ಅದ್ಭುತ ಕೃತ್ಯಗಳನ್ನು ನಡಿಸಿದ್ದಾನೆ. ಆತನ ಬಲಗೈಯೂ ಪರಿಶುದ್ಧ ಬಾಹುವೂ ಜಯವನ್ನು ಉಂಟುಮಾಡಿವೆ.'' (ಕೀರ್ತ.98:1).

10.''ಯೆಹೋವನ ಘನತೆಯನ್ನೂ ಆತನ ಪರಾಕ್ರಮವನ್ನೂ ಅದ್ಭುತ ಕೃತ್ಯಗಳನ್ನೂ ಮುಂದಣ ಸಂತತಿಯವರಿಗೆ ವಿವರಿಸುವೆವು.'' (ಕೀರ್ತ.78:4).

## 9. ಜ್ಞಾನವನ್ನು ಕೊಡುವಾತನು!

1. ''ಯೆಹೋವನೇ ಜ್ಞಾನವನ್ನು ಕೊಡುವಾತನು, ಆತನ ಬಾಯಿಂದಲೇ ತಿಳುವಳಿಕೆಯೂ ವಿವೇಕವೂ ಹೊರಟು ಬರುತ್ತವೆ.'' (ಜ್ಞಾನೋ.2:6).

2. ''ಜ್ಞಾನವು ನಿನ್ನ ಹೃದಯದೊಳಗೆ ಪ್ರವೇಶಿಸುವದು. ತಿಳುವಳಿಕೆಯು ನಿನ್ನ ಆತ್ಮಕ್ಕೆ ಅಂದವಾಗಿರುವದು.'' (ಜ್ಞಾನೋ.2:10).

3. ''ಹೀಗಾದರೆ ನೀನು ಸುಬುದ್ಧಿಯನ್ನು ಕೈಗೊಳ್ಳುವಿ, ನಿನ್ನ ತುಟಿಗಳು ತಿಳುವಳಿಕೆಯನ್ನು ಕಾಪಾಡುವವು.'' (ಜ್ಞಾನೋ.5:2).

4. ''ಜ್ಞಾನವೆಂಬ ನನಗೆ ಜಾಣ್ಮೆಯೇ ನಿವಾಸ, ಯುಕ್ತಿಗಳ ತಿಳುವಳಿಕೆಯನ್ನು ಹೊಂದಿದ್ದೇನೆ.'' (ಜ್ಞಾನೋ.8:12).

5. "ಯೆಹೋವನ ಭಯವೇ ಜ್ಞಾನಕ್ಕೆ ಮೂಲವು; ಪರಿಶುದ್ಧನ ತಿಳುವಳಿಕೆಯೇ ವಿವೇಕವು." (ಜ್ಞಾನೋ.9:10).

6. "ನಮ್ಮ ಕರ್ತನು ದೊಡ್ಡವನೂ ಪರಾಕ್ರಮಿಯೂ ಆಗಿದ್ದಾನೆ; ಆತನ ಜ್ಞಾನವು ಅಪರಿಮಿತವಾಗಿದೆ." (ಕೀರ್ತ.147:5).

7. "ದೇವರು ತಾನು ಮೆಚ್ಚಿದವನಿಗೆ ಜ್ಞಾನವನ್ನೂ ತಿಳುವಳಿಕೆಯನ್ನೂ ಸಂತೋಷವನ್ನೂ ದಯಪಾಲಿಸುತ್ತಾನಲ್ಲವೆ;" (ಪ್ರಸಂಗಿ.2:26).

8. "ಆ ಅಂಕುರದ ಮೇಲೆ ಜ್ಞಾನ, ವಿವೇಕದಾಯಕ ಆತ್ಮ; ಆಲೋಚನಾ ಪರಾಕ್ರಮಗಳನ್ನು ಹುಟ್ಟಿಸುವ ಆತ್ಮ, ತಿಳುವಳಿಕೆಯನ್ನೂ ಕರ್ತನ ಭಯವನ್ನೂ ಉಂಟುಮಾಡುವ ಆತ್ಮ, ಅಂತು ಕರ್ತನ ಆತ್ಮವೇ ನೆಲೆಗೊಂಡಿರುವದು." (ಯೆಶಾ.11:2).

9. "ನನ್ನ ಪರಿಶುದ್ಧ ಪರ್ವತದಲ್ಲೆಲ್ಲಾ ಯಾರೂ ಕೇಡು ಮಾಡುವದಿಲ್ಲ. ಯಾರೂ ಹಾಳು ಮಾಡುವದಿಲ್ಲ; ಸಮುದ್ರದಲ್ಲಿ ನೀರು ಹೇಗೋ ಹಾಗೆಯೇ ಭೂಮಿಯಲ್ಲಿ ಕರ್ತನ ಜ್ಞಾನವು ತುಂಬಿಕೊಂಡಿರುವದು." (ಯೆಶಾ.11:9).

10. "ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾಗಲೂ ಜಯೋತ್ಸವದೊಡನೆ ಮೆರಸುತ್ತಾ ಆತನ ವಿಷಯವಾದ ಜ್ಞಾನವೆಂಬ ಸುವಾಸನೆಯನ್ನು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸುತ್ತಾ ಬರುವ ದೇವರಿಗೆ ಸ್ತೋತ್ರವು." (2 ಕೊರಿ.2:14).

# 10. ಅನುಗ್ರಹ!

1. "ದೇವರು ನನಗೆ ಕೃಪೆಯನ್ನು ಮಾಡಿದ್ದರಿಂದ ನನಗೆ ಸಮೃದ್ಧಿಯುಂಟು." (ಆದಿ.33:11).

2. "ಇದೇ ಯೆಹೋವನ ನುಡಿ - ಈ ಪ್ರಸನ್ನತೆಯ ಕಾಲದಲ್ಲಿ ನಿನಗೆ ಸದುತ್ತರವನ್ನು ದಯಪಾಲಿಸಿದ್ದೇನೆ; ಈ ರಕ್ಷಣೆಯ ದಿನದಲ್ಲಿ ನಿನಗೆ ಸಹಾಯ ಮಾಡಿದ್ದೇನೆ." (ಯೆಶಾ.49:8).

3. "ಇದಲ್ಲದೆ ಪ್ರತಿಯೊಬ್ಬನು ಅನ್ನ ಪಾನಗಳನ್ನು ತೆಗೆದುಕೊಂಡು ತನ್ನ ನಾನಾ ಪ್ರಯಾಸಗಳಲ್ಲಿಯೂ ಸುಖವನ್ನು ಅನುಭವಿಸುವದು ದೇವರ ಅನುಗ್ರಹವೇ ಎಂದು ನನಗೆ ಗೊತ್ತಿದೆ." (ಪ್ರಸ.3:13).

4. "...ಆತನು ಯಾವನಿಗೆ ಆಸ್ತಿಪಾಸ್ತಿಗಳನ್ನು ದಯಪಾಲಿಸುವದಲ್ಲದೆ ಅದನ್ನು ಅನುಭವಿಸಿ ಪಾಲಿಗೆ ಬಂದದ್ದನ್ನು ಹೊಂದಿ ತನ್ನ ಪ್ರಯಾಸದಲ್ಲಿ ಸಂತೋಷಪಡಲು ಶಕ್ತಿಕೊಡುವನೋ, ಅವನ ಸುಖವು ದೇವರ ಅನುಗ್ರಹ." (ಪ್ರಸ.5:19).

5. "ಆ ಸ್ಥಿರಚಿತ್ತವನ್ನೂ ಆದರಣೆಯನ್ನೂ ಕೊಡುವ ದೇವರು ನೀವು ಕ್ರಿಸ್ತ ಯೇಸುವನ್ನು ಅನುಸರಿಸಿ ಒಂದೇ ಮನಸ್ಸುಳ್ಳವರಾಗಿರುವಂತೆ ನಿಮಗೆ ದಯಪಾಲಿಸಲಿ." (ರೋಮ.15:5).

6. "ಆದರೆ ನಾನು ದೇವರಿಂದ ಸಹಾಯವನ್ನು ಪಡೆದು ಈ ದಿನದವರೆಗೂ ಸುರಕ್ಷಿತವಾಗಿದ್ದು ಚಿಕ್ಕವರಿಗೂ ದೊಡ್ಡವರಿಗೂ ಸಾಕ್ಷಿಹೇಳುವವನಾಗಿದ್ದೇನೆ." (ಅಪೊ.ಕೃ.26:22).

7. "ನನಗಾಗಿ ಒಂದು ಶುಭಸೂಚನೆಯನ್ನು ತೋರಿಸು; ನನ್ನ ಹಗೆಗಾರರು ನೋಡಿ-ಕರ್ತನು ನೆರವಾಗಿ ಇವನನ್ನು ಸಂತೈಸಿದ್ದಾನೆಂದು ನಾಚಿಕೆಪಡಲಿ." (ಕೀರ್ತ.86:17).

8. "ನಿನ್ನ ಸೇವಕನಾದ ನನ್ನ ಮೇಲೆ ದಯವಿಡು; ಆಗ ಜೀವದಿಂದಿದ್ದು ನಿನ್ನ ವಾಕ್ಯವನ್ನು ಕೈಕೊಳ್ಳುವೆನು." (ಕೀರ್ತ.119:17).

9. "ಯಾಕೆಂದರೆ ಕಾರ್ಯಕ್ಕೆ ಅನುಕೂಲವಾದ ಮಹಾ ಸಂದರ್ಭವು ನನಗುಂಟು, ಮತ್ತು ವಿರೋಧಿಗಳು ಬಹಳ ಮಂದಿ ಇದ್ದಾರೆ." (1 ಕೊರಿ.16:9).

10. "ಸತ್ಯಾಭಿವೃದ್ಧಿಗೋಸ್ಕರವೇ ಸಮಸ್ತವನ್ನು ಮಾಡುತ್ತೇವೆ." (2 ಕೊರಿ.13:8)

## 11. ಆಲೋಚನೆ ಕೊಡುವಾತನು!

1. "ದೇವರೇ, ನಿನ್ನ ಸಂಕಲ್ಪಗಳು ನನ್ನ ಎಣಿಕೆಯಲ್ಲಿ ಎಷ್ಟೋ ಗೌರವವಾಗಿವೆ. ಅವುಗಳ ಒಟ್ಟು ಅಸಂಖ್ಯವಾಗಿವೆ" (ಕೀರ್ತ.139:17).

2. "ಯೆಹೋವನು ನನಗೆ ಆಲೋಚನೆಯನ್ನು ಹೇಳಿಕೊಡುತ್ತಾನೆ; ಆತನನ್ನು ಕೊಂಡಾಡುವೆನು, ರಾತ್ರಿ ಸಮಯಗಳಲ್ಲಿ ನನ್ನ ಅಂತರಾತ್ಮವು ನನ್ನನ್ನು ಬೋಧಿಸುತ್ತದೆ." (ಕೀರ್ತ.16:7).

3. "ಯೆಹೋವನ ಆಲೋಚನೆಯೋ ಶಾಶ್ವತವಾಗಿಯೇ ನಿಲ್ಲುವದು" (ಕೀರ್ತ.33:11).

5. ''ಉಚಿತಾಲೋಚನೆ ಇಲ್ಲದ ಕಡೆ ಪ್ರಜೆಯು ಬಿದ್ದು ಹೋಗುವದು, ಬಹು ಸುಮಂತ್ರಿಗಳು ಇರುವಲ್ಲಿ ಸುರಕ್ಷಣೆಯಿರುವದು.'' (ಜ್ಞಾನೋ.11:14).

6. ''ಉದ್ದೇಶಗಳು ಮಂತ್ರಾಲೋಚನೆಯಿಂದ ನೆರವೇರುವವು; ಮಂತ್ರಾಲೋಚನೆಯಿಂದಲೇ ಯುದ್ಧವನ್ನು ನಡಿಸು'', (ಜ್ಞಾನೋ.20:18).

7. ''ತೈಲವೂ ಸುಗಂಧದ್ರವ್ಯಗಳೂ ಹೇಗೋ ಮಿತ್ರನ ಸಂಭಾಷಣೆಯಿಂದ ಅನುಭವಕ್ಕೆ ಬರುವ ಸ್ನೇಹ ರಸವು ಹಾಗೆ ಮನೋಹರ.'' (ಜ್ಞಾನೋ.27:9).

8. ''ಈ ವಿವೇಕವು ಸಹ ಅತಿಶಯಾಲೋಚನಾಪರನೂ, ಸುಜ್ಞಾನ ಶ್ರೇಷ್ಠನೂ ಆಗಿರುವ ಸೇನಾಧೀಶ್ವರನಾದ ಕರ್ತನಿಂದಲೇ ಉಂಟಾಗುತ್ತದೆ.''(ಯೆಶಾ.28:29).

9. ''ಮಾನವೇ, ಸುಜ್ಞಾನವನ್ನೂ, ಬುದ್ಧಿಯನ್ನೂ ಭದ್ರವಾಗಿಟ್ಟುಕೋ, ನಿನ್ನ ದೃಷ್ಟಿಯು ಅವುಗಳ ಮೇಲೆ ತಪ್ಪದೇ ಇರಲಿ.'' (ಜ್ಞಾನೋ.3:21).

10.''ನಿನ್ನ ಚಿತ್ತವನ್ನು ತಿಳಿಯಪಡಿಸಿ ನನ್ನನ್ನು ನಡಿಸಿ ತರುವಾಯ ಮಹಿಮೆಗೆ ಸೇರಿಸಿಕೊಳ್ಳುವಿ.'' (ಕೀರ್ತ.73:24).

# 12. ಸಹಾಯ ಕೊಡುವ ದೇವರು!

1. "ಭಯಪಡಬೇಡ, ನಿನಗೆ ಸಹಾಯ ಮಾಡುತ್ತೇನೆ, ಎಂದು ನಿನಗೆ ಹೇಳುವ ನಿನ್ನ ದೇವರಾದ ಯೆಹೋವನೆಂಬ ನಾನೇ ನಿನ್ನ ಕೈ ಹಿಡಿಯುತ್ತೇನಲ್ಲಾ." (ಯೆಶಾ.41:13).

2. "ಆಹಾ, ಕರ್ತನಾದ ಯೆಹೋವನು ನನಗೆ ಸಹಾಯ ಮಾಡುವನು; ನನ್ನನ್ನು ಅಪರಾಧಿ ಎಂದು ನಿರ್ಣಯಿಸುವವನು ಯಾರು? ಇಗೋ, ಅವರೆಲ್ಲರೂ ವಸ್ತ್ರದಂತೆ ಜೀರ್ಣವಾಗುವರು; ಅವರನ್ನು ನುಸಿಯು ತಿಂದು ಬಿಡುವದು." (ಯೆಶಾ.50:9).

3. "ಯಾವನಿಗೆ ಯಾಕೋಬನು ದೇವರು ಸಹಾಯಕನೋ, ಯಾವನು ತನ್ನ ದೇವರಾದ ಕರ್ತನನ್ನು ನಂಬಿರುತ್ತಾನೋ ಅವನೇ ಧನ್ಯನು" (ಕೀರ್ತ.146:5).

4. "ಆದರೆ ಕರ್ತನು ನನ್ನ ಬಳಿಯಲ್ಲಿ ನಿಂತು ನನ್ನನ್ನು ಬಲಪಡಿಸಿ, ನನ್ನ ಮೂಲಕ ಸುವಾರ್ತೆಯು ಸಂಪೂರ್ಣವಾಗಿ ಸಾರಲ್ಪಡು ವಂತೆಯೂ ಅನ್ಯಜನರೆಲ್ಲರೂ ಅದನ್ನು ಕೇಳುವಂತೆಯೂ ಮಾಡಿದನು." (2 ತಿಮೋ.4:17).

5. "ಯೆಹೋವನ ಭಕ್ತರೇ, ಯೆಹೋವನಲ್ಲಿ ಭರವಸವಿಡಿರಿ; ಅವರ ಸಹಾಯಕನೂ ಗುರಾಣಿಯೂ ಆತನೇ." (ಕೀರ್ತ.115:11).

6. "ನಾನಾದರೋ ಕುಗ್ಗಿದವನೂ ದಿಕ್ಕಿಲದವನೂ ಆಗಿದ್ದೇನೆ; ದೇವರೇ, ಶೀಘ್ರವಾಗಿ ಬಾ, ಯೆಹೋವನೇ ನೀನೇ ನನಗೆ ಸಹಾಯಕನೂ ರಕ್ಷಕನೂ ಆಗಿದ್ದೀ; ತಡಮಾಡಬೇಡ;" (ಕೀರ್ತ.70:5).

7. "ನೀನು ನನಗೆ ಸಹಾಯಕನಾಗಿದ್ದೀಯಲ್ಲಾ; ನಿನ್ನ ರೆಕ್ಕೆಗಳ ಮರೆಯಲ್ಲಿ ಸುರಕ್ಷಿತವಾಗಿದ್ದುಕೊಂಡು ಆನಂದಘೋಷ ಮಾಡುತ್ತಿರುವೆನು." (ಕೀರ್ತ.63:7).

8. "ನಮ್ಮ ಮನಸ್ಸು ಯೆಹೋವನಿಗೋಸ್ಕರ ಕಾದಿದೆ; ನಮ್ಮ ಸಹಾಯವೂ ಗುರಾಣಿಯೂ ಆತನೇ." (ಕೀರ್ತ.33:20).

9. "ನಾವು ನಿನ್ನವರು; ಶುಭವಾಗಲಿ! ಇಷಯನ ಮಗನೇ, ನಾವು ನಿನ್ನ ಪಕ್ಷದವರು; ಶುಭವಾಗಲಿ; ನಿನಗೂ ನಿನ್ನ ಸಹಾಯಕರಿಗೂ ಶುಭವಾಗಲಿ! ನಿನ್ನ ದೇವರು ನಿನಗೆ ಜಯಪ್ರದವಾಗಿದ್ದಾನೆ." (1.ಪೂರ್ವ.ವೃ.12:18).

10."ಯೆಹೋವನೇ, ಬಲಿಷ್ಠನು ಬಲಹೀನನ ಮೇಲೆ ಬೀಳುವಲ್ಲಿ ನಿನ್ನ ಹೊರತು ರಕ್ಷಕನಿಲ್ಲ. ನಮ್ಮ ದೇವರಾದ ಕರ್ತನೇ ನಮ್ಮನ್ನು ರಕ್ಷಿಸು. ನಿನ್ನಲ್ಲಿ ಭರವಸವಿಟ್ಟು ನಿನ್ನ ಹೆಸರಿನಲ್ಲಿ ಈ ಮಹಾಸಮೂಹಕ್ಕೆ ವಿರೋಧವಾಗಿ ಯುದ್ಧಕ್ಕೆ ಬಂದೆವಲ್ಲಾ. ಕರ್ತನೇ, ನಮ್ಮ ದೇವರು ನೀನು. ನರರು ನಿನ್ನನ್ನು ಎದುರಿಸಿ ಗೆಲ್ಲಬಾರದು." (2ಪೂರ್ವ.ವೃ.14:11.)

## 13. ಅದ್ಭುತಗಳ ದೇವರು!

1. "ಯೆಹೋವನೇ, ದೇವರುಗಳಲ್ಲಿ ನಿನ್ನ ಸಮಾನನು ಯಾವನು? ಪರಿಶುದ್ಧತ್ವದಿಂದ ಸರ್ವೋತ್ತಮನೂ ಪ್ರಖ್ಯಾತಕೃತ್ಯಗಳನ್ನು ಮಾಡಿರುವದರಿಂದ ಭಯಂಕರನೂ ಅದ್ಭುತಗಳನ್ನು ನಡಿಸುವವನೂ ಆಗಿರುವ ನಿನಗೆ ಸಮಾನನು ಎಲ್ಲಿ?" (ವಿಮೋ.15:11).

2. "ನಿಮ್ಮನ್ನು ಶುದ್ಧಮಾಡಿಕೊಳ್ಳಿರಿ; ಯೆಹೋವನು ನಾಳೆ ನಿಮ್ಮ ಮಧ್ಯದಲ್ಲಿ ಅದ್ಭುತಗಳನ್ನು ನಡಿಸುವನು." (ಯೆಹೋ.3:5).

3. "ಆತನು ಮಾಡಿದ ಈ ಸೂಚಕಕಾರ್ಯವನ್ನು ಆ ಜನರು ನೋಡಿ ಲೋಕಕ್ಕೆ ಬರಬೇಕಾದ ಪ್ರವಾದಿ ಈತನೇ ನಿಜ ಎಂದು ಹೇಳಿಕೊಂಡರು." (ಯೋಹಾ.6:14).

4. "ದೇವರು ತನ್ನ ಸಭೆಯಲ್ಲಿ ಮೊದಲನೇದಾಗಿ ಅಪೋಸ್ತಲರನ್ನು ಎರಡನೇದಾಗಿ ಪ್ರವಾದಿಗಳನ್ನು ಮೂರನೇದಾಗಿ ಉಪದೇಶಕರನ್ನೂ ಇಟ್ಟಿದ್ದಾನೆ, ಆ ಮೇಲೆ ಮಹತ್ಕಾರ್ಯಮಾಡುವ ಶಕ್ತಿಯನ್ನೂ... ಕೊಟ್ಟಿದ್ದಾನೆ." (1 ಕೊರಿ.12:28).

5. "ದೇವರಾತ್ಮನ ಮೂಲಕ ...ನಂಬಿಕೆಯು, ಒಬ್ಬನಿಗೆ ಆ ಆತ್ಮನಿಂದಲೇ ನಾನಾ ರೋಗಗಳನ್ನು ವಾಸಿ ಮಾಡುವ ವರವು, ಒಬ್ಬನಿಗೆ ಮಹತ್ತುಗಳನ್ನು ಮಾಡುವ ವರವು ...ಕೊಡಲ್ಪಡುತ್ತದೆ." (1 ಕೊರಿ.12:9,10).

6. "ಬಹು ಜನರ ಗುಂಪು ರೋಗಿಗಳಲ್ಲಿ ಆತನು ನಡಿಸಿದ ಸೂಚಕಕಾರ್ಯಗಳನ್ನು ನೋಡಿದ್ದರಿಂದ ಆತನ ಹಿಂದೆ ಹೋಗುತ್ತಿತ್ತು." (ಯೋಹಾ.6:2).

7. "ಯೇಸು ಇನ್ನು ಬೇರೆ ಎಷ್ಟೋ ಸೂಚಕ ಕಾರ್ಯಗಳನ್ನು ತನ್ನ ಶಿಷ್ಯರ ಮುಂದೆ ಮಾಡಿದನು. ಅವುಗಳು ಈ ಗ್ರಂಥದಲ್ಲಿ ಬರೆದಿರುವದಿಲ್ಲ" (ಯೋಹಾ.20:30).

8. "ನಾನು ಈ ಜನರ ಮಧ್ಯದಲ್ಲಿ ಅಧಿಕಾಶ್ಚರ್ಯವೂ ಅದ್ಭುತವೂ ಆದ ಕಾರ್ಯವನ್ನು ಇನ್ನು ಮಾಡುವೆನು" (ಯೆಶಾ.29:14).

9. "ಆಹಾ, ನಾನೂ ನನಗೆ ಯೆಹೋವನು ದಯಪಾಲಿಸಿರುವ ಮಕ್ಕಳೂ ಚಿಯೋನ್ ಪರ್ವತದಲ್ಲಿ ವಾಸವಾಗಿರುವ ಸೇನಾಧೀಶ್ವರನಾದ ಯೆಹೋವನಿಂದುಂಟಾದ ಗುರುತುಗಳಾಗಿಯೂ ಅದ್ಭುತಗಳಾಗಿಯೂ ಇಸ್ರಾಯೇಲ್ಯರ ಮಧ್ಯದಲ್ಲಿದ್ದೇವೆ." (ಯೆಶಾ.8:18)

10."ಆತನ ಅದ್ಭುತಕೃತ್ಯ ಮಹತ್ಕಾರ್ಯ ನ್ಯಾಯನಿರ್ಣಯ ಗಳನ್ನು ನೆನಪುಮಾಡಿಕೊಳ್ಳಿರಿ." (1 ಪೂರ್ವ.16:13).

## 14. ಸಂತೈಸುವ ದೇವರು!

1. "ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ ತಂದೆಯೂ ಆಗಿರು ವಾತನಿಗೆ ಸ್ತೋತ್ರವಾಗಲಿ. ಆತನು ಕನಿಕರವುಳ್ಳ ತಂದೆಯೂ ಸಕಲ ವಿಧವಾಗಿ ಸಂತೈಸುವ ದೇವರೂ ಆಗಿದ್ದಾನೆ." (2 ಕೊರಿ.1:3).

2. "ನಮಗೆ ಸಂಭವಿಸುವ ಎಲ್ಲಾ ಸಂಕಟಗಳಲ್ಲಿ ನಮ್ಮನ್ನು ಸಂತೈಸುತ್ತಾನೆ. ಹೀಗೆ ದೇವರಿಂದ ನಮಗಾಗುವ ಆದರಣೆಯ ಮೂಲಕ ನಾವು ನಾನಾ ವಿಧವಾದ ಸಂಕಟಗಳಲ್ಲಿ ಬಿದ್ದಿರುವವರನ್ನು ಸಂತೈಸುವದಕ್ಕೆ ಶಕ್ತರಾಗುತ್ತೇವೆ." (2 ಕೊರಿ.1:4).

3. "ಆದರೆ ದೀನಾವಸ್ಥೆಯಲ್ಲಿರುವವರನ್ನು ಸಂತೈಸುವ ದೇವರು ತೀತನ ಬರುವಿಕೆಯಿಂದ ನಮ್ಮನ್ನು ಸಂತೈಸಿದನು."(2 ಕೊರಿ.7:6)

4. "ನನ್ನಲ್ಲಿ ಅನೇಕ ಚಿಂತೆಗಳಿರುವಾಗ ನಿನ್ನ ಸಂತೈಸುವಿಕೆಯಿಂದಲೇ ನನ್ನ ಪ್ರಾಣಕ್ಕೆ ಸಂತೋಷವುಂಟಾಗುತ್ತದೆ." (ಕೀರ್ತ.94:19).

5. "ನಿನ್ನ ನುಡಿಯು ನನ್ನನ್ನು ಚೈತನ್ಯಗೊಳಿಸುತ್ತದೆ. ಆಪತ್ಕಾಲದಲ್ಲಿ ಇದೇ ನನಗೆ ಆದರಣೆ." (ಕೀರ್ತ.119:50).

6. "ಅವರ ಮಾರ್ಗಗಳನ್ನು ನೋಡಿದ್ದೇನೆ: ಅವರನ್ನು ಸ್ವಸ್ಥಮಾಡಿ ನಡಿಸುತ್ತಾ ಅವರಿಗೆ, ಅವರಲ್ಲಿಯೂ ದುಃಖಿತರಿಗೆ ಆದರಣೆಯನ್ನು ಪ್ರತಿಫಲವಾಗಿ ಕೊಡುವೆನು." (ಯೆಶಾ.57:18).

7. "ಆ ಸ್ಥಿರಚಿತ್ತವನ್ನೂ ಆದರಣೆಯನ್ನೂ ಕೊಡುವ ದೇವರು ನೀವು ಕ್ರಿಸ್ತಯೇಸುವನ್ನು ಅನುಸರಿಸಿ ಒಂದೇ ಮನಸ್ಸುಳ್ಳವರಾಗಿರುವಂತೆ ನಿಮಗೆ ದಯಪಾಲಿಸಲಿ." (ರೋಮಾ.15:5).

8. "ನಾವು ಓದಿ ಸ್ಥಿರಚಿತ್ತವನ್ನೂ ಆದರಣೆಯನ್ನೂ ಹೊಂದಿ ರಕ್ಷಣೆಯ ನಿರೀಕ್ಷೆಯಲ್ಲಿರುವರಾಗಿರುವಂತೆ ಬರೆಯಲ್ಪಟ್ಟಿತು" (ರೋಮಾ.15:4).

9. "ಉನ್ನತಲೋಕವೆಂಬ ಪವಿತ್ರಾಲಯದಲ್ಲಿ ವಾಸಿಸುವ ನಾನು ಜಜ್ಜಿಹೋದ ದೀನಮನದೊಂದಿಗೆ ಇದ್ದುಕೊಂಡು ದೀನನ ಆತ್ಮವನ್ನೂ ಜಜ್ಜಿಹೋದವನ ಮನಸ್ಸನ್ನೂ ಉಜ್ಜೀವಿಸುವವನಾಗಿದ್ದೇನೆ" (ಯೆಶಾ.57:15).

10. "ಸಹೋದರನೇ, ನಿನ್ನ ಮೂಲಕ ದೇವಜನರ ಹೃದಯಗಳಿಗೆ ಪ್ರೋತ್ಸಾಹ ಉಂಟಾದದರಿಂದ ನಿನ್ನ ಪ್ರೀತಿಯ ನಿಮಿತ್ತ ನನಗೆ ಬಹಳ ಸಂತೋಷವೂ ಆದರಣೆಯೂ ಉಂಟಾದವು." (ಫಿಲೆ.7).

## 15. ರಕ್ಷಣಾ ಕರ್ತನು!

1. "ಅಂಜಬೇಡಿರಿ, ಸುಮ್ಮನೆ ನಿಂತುಕೊಂಡಿದ್ದು ಯೆಹೋವನು ಈ ಹೊತ್ತು ನಿಮ್ಮನ್ನು ರಕ್ಷಿಸುವ ರೀತಿಯನ್ನು ನೋಡಿರಿ. ಈ ಹೊತ್ತು ನೋಡುವ ಐಗುಪ್ತ್ಯರನ್ನು ಇನ್ನು ಮುಂದೆ ಎಂದಿಗೂ ನೋಡುವದಿಲ್ಲ" (ವಿಮೋ.14:13).

2. "ನನ್ನ ಬಲವೂ ಕೀರ್ತನೆಯೂ ಯಾಹುವೇ, ಆತನಿಂದ ನನಗೆ ರಕ್ಷಣೆಯುಂಟಾಯಿತು" (ವಿಮೋ.15:2).

3. "ಶತ್ರುಗಳ ಮುಂದೆ ನನ್ನ ಬಾಯಿ ತೆರೆದಿರುವದು. ನಿನ್ನ ರಕ್ಷಣೆಯಲ್ಲಿ ಆನಂದಿಸುತ್ತೇನೆ." (1 ಸಮು.2:1).

4. "ಯೆಹೋವನು ಚೈತನ್ಯ ಸ್ವರೂಪನು; ನನ್ನ ಶರಣನಿಗೆ ಸ್ತೋತ್ರ. ನನ್ನ ಆಶ್ರಯಗಿರಿಯಾಗಿರುವ ದೇವರಿಗೆ ಕೊಂಡಾಟ." (2 ಸಮು.22:47).

5. "ಬರಬೇಕಾದ ರಕ್ಷಣೆಯು ಇನ್ನಾರಲ್ಲಿಯೂ ಸಿಕ್ಕುವದಿಲ್ಲ. ಆ ಹೆಸರಿನಿಂದಲೇ (ಯೇಸು) ಹೊರತು ಆಕಾಶದ ಕೆಳಗೆ ಮನುಷ್ಯರೊಳಗೆ ಕೊಡಲ್ಪಟ್ಟಿರುವ ಬೇರೆ ಯಾವ ಹೆಸರಿನಿಂದಲೂ ನಮಗೆ ರಕ್ಷಣೆ ಯಾಗುವದಿಲ್ಲ" (ಅಪೊ.4:12).

6. “ಚಿಯೋನಿನಿಂದ ಇಸ್ರಾಯೇಲ್ಯರಿಗೆ ರಕ್ಷಣೆಯು ಬೇಗನೆ ಬರಲಿ.” (ಕೀರ್ತ.14:7).

7. “ಇಗೋ ನಿನ್ನ ರಕ್ಷಣೆಯು ಸಮೀಪವಾಯಿತು. ಯೆಹೋವನು ದಯಪಾಲಿಸುವ ಬಹುಮಾನವು ಆತನೊಂದಿಗಿದೆ.” (ಯೆಶಾ.62:11).

8. “ಚೀಯೋನಿನಲ್ಲಿ ರಕ್ಷಣಾಕಾರ್ಯವನ್ನು ನಡಿಸಿ, ಇಸ್ರಾಯೇಲ್ಯರಿಗೆ ನನ್ನ ಮಹಿಮೆಯನ್ನು ದಯಪಾಲಿಸುವೆನು.” (ಯೆಶಾ.46:13).

9. “ಎಲಾ ದಿಗಂತಗಳವರೇ, ನನ್ನ ಕಡೆಗೆ ತಿರುಗಿ ಕೊಳ್ಳಿರಿ, ರಕ್ಷಣೆಯನ್ನು ಹೊಂದಿಕೊಳ್ಳಿರಿ; ನಾನೇ ದೇವರು ಇನ್ನು ಯಾರೂ ಇಲ್ಲ.” (ಯೆಶಾ.45:22).

10.“ಅವನು ನನ್ನಲ್ಲಿ ಆಸಕ್ತನಾಗಿರುವದರಿಂದ ಅವನನ್ನು ರಕ್ಷಿಸುವೆನು.” (ಕೀರ್ತ.91:14).

## 16. ವಿಶ್ರಾಂತಿಯನ್ನುಂಟುಮಾಡುವ ಯೆಹೋವನು!

1. “ನಾನೇ ನಿಮ್ಮ ಜೊತೆಯಲ್ಲಿ ಬಂದು ನಿಮಗೆ ವಿಶ್ರಾಂತಿಯನ್ನು ಉಂಟುಮಾಡುವೆನು.” (ವಿಮೋ.33:14).

2. “ನಿಮ್ಮ ದೇವರಾದ ಯೆಹೋವನು ನಿಮಗೆ ಈ ದೇಶವನ್ನು ಕೊಟ್ಟು, ವಿಶ್ರಾಂತಿಯನ್ನುಂಟು ಮಾಡಿದ್ದಾನೆ.” (ಯೆಹೋ.1:13).

3. "ತಾನು ವಾಗ್ದಾನ ಮಾಡಿದಂತೆ ತನ್ನ ಪ್ರಜೆಗಳಾದ ಇಸ್ರಾಯೇಲ್ಯರಿಗೆ ವಿಶ್ರಾಂತಿಯನ್ನು ಅನುಗ್ರಹಿಸಿದ ಯೆಹೋವನಿಗೆ ಸ್ತೋತ್ರವಾಗಲಿ." (1ಅರಸು.8:56).

4. "ದೇವಾನುಗ್ರಹದಿಂದ ಸುತ್ತಣ ವೈರಿಗಳ ಭಯತಪ್ಪಿ ಯೆಹೋಷಾಫಾಟನ ರಾಜ್ಯಕ್ಕೆ ಸಮಾಧಾನವುಂಟಾಯಿತು" (2 ಪೂರ್ವ.20:30).

5. "ನನ್ನ ಮನವೇ, ನಿನ್ನ ವಿಶ್ರಾಂತಿಯ ನೆಲೆಗೆ ತಿರುಗು, ಯೆಹೋವನು ನಿನಗೆ ಮಹೋಪಕಾರಗಳನ್ನು ಮಾಡಿದ್ದಾನಲ್ಲಾ" (ಕೀರ್ತ.116:7).

6. "ಇದೇ ನಿಮಗೆ ಅವಶ್ಯಕವಾದ ವಿಶ್ರಾಂತಿ ಬಳಲಿದವರನ್ನು ವಿಶ್ರಮಗೊಳಿಸಿರಿ. ನಿಮಗೆ ಅನುಕೂಲವಾದ ಉಪಶಮನವು ಇದೇ." (ಯೆಶಾ.28:12).

7. "ನನಗಾದರೋ ನನ್ನ ದೇವರಾದ ಯೆಹೋವನು ಎಲ್ಲಾ ಕಡೆಗಳಲ್ಲಿಯೂ ಸಮಾಧಾನವನ್ನು ಅನುಗ್ರಹಿಸಿದ್ದಾನೆ; ನನ್ನನ್ನು ವಿರೋಧಿಸುವವನು ಒಬ್ಬನೂ ಇಲ್ಲ; ಆಪತ್ತು ನನಗೆ ದೂರವಾಗಿದೆ." (1 ಅರಸು 5:4).

8. "ಎಲ್ಲೈ ಕಷ್ಟಪಡುವವರೇ, ಹೊರೆಹೊತ್ತವರೇ ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ; ನಾನು ನಿಮಗೆ ವಿಶ್ರಾಂತಿ ಕೊಡುವೆನು." (ಮತ್ತಾ.11:28).

9. "ಪುರಾತನ ಮಾರ್ಗಗಳು ಯಾವವು; ಆ ಸನ್ಮಾರ್ಗವು ಎಲ್ಲಿ ಎಂದು ವಿಚಾರಿಸಿ ಅದರಲ್ಲೇ ನಡೆಯಿರಿ; ಇದರಿಂದ ನಿಮ್ಮ ಆತ್ಮಗಳಿಗೆ ವಿಶ್ರಾಂತಿ ಸಿಕ್ಕುವುದು." (ಯೆರೆ.6:16).

10. "ನಿಮ್ಮ ಜೊತೆದಾಸರ ಸಂಖ್ಯೆಯೂ ಪೂರ್ಣವಾಗುವ ತನಕ ಇನ್ನೂ ಸ್ವಲ್ಪಕಾಲ ವಿಶ್ರಮಿಸಿ ಕೊಂಡಿರಬೇಕೆಂದು ಅವರಿಗೆ ಉತ್ತರವಾಯಿತು." (ಪ್ರಕ.6:11).

## 17. ದಯೆತೋರಿಸುವ ಯೆಹೋವನು!

1. "ನನ್ನನ್ನು ಪ್ರೀತಿಸಿ ನನ್ನ ಆಜ್ಞೆಗಳನ್ನು ಕೈಕೊಳ್ಳುವವರಿಗೋ ಸಾವಿರ ತಲೆಗಳವರೆಗೆ ದಯೆತೋರಿಸುವವನಾಗಿಯೂ ಇದ್ದೇನೆ." (ವಿಮೋ.20:6).

2. "ಯಾವನ ಮೇಲೆ ದಯೆ ಇಡುವೆನೋ ಅವನ ಮೇಲೆ ದಯೆಯಿಡುವೆನು; ಯಾರನ್ನು ಕರುಣಿಸುವೆನೋ ಅವನನ್ನು ಕರುಣಿಸುವೆನು." (ವಿಮೋ.33:19).

3. "ಯೆಹೋವನೇ, ನೀನು ಒಳ್ಳೆಯವನೂ ಕ್ಷಮಿಸುವವನೂ ನಿನಗೆ ಮೊರೆಯಿಡುವವರೆಲ್ಲರಲ್ಲಿ ಕೃಪಾಪೂರ್ಣನೂ ಆಗಿದ್ದೀಯಲ್ಲಾ" (ಕೀರ್ತ.86:15).

4. "ಆತನ ಕೃಪಾವರವು ನಿಂತು ಹೋಗವು; ದಿನ ದಿನವೂ ಹೊಸ ಹೊಸದಾಗಿ ಒದಗುತ್ತವೆ. ನಿನ್ನ ಸತ್ಯಸಂಧತೆಯು ದೊಡ್ಡದು." (ಪ್ರಲಾ.3:22,23).

5. "ಯೆಹೋವನಾದ ನಮ್ಮ ದೇವರು ಕರುಣೆಸುವವನೂ ಕ್ಷಮಿಸುವವನೂ ಆಗಿದ್ದಾನೆ." (ದಾನಿ.9:9).

6. "ಆತನಲ್ಲಿ ಭಯಭಕ್ತಿಯುಳ್ಳವರ ಮೇಲೆ ಆತನ ದಯೆವು ತಲತಲಾಂತರರದವರೆಗೂ ಇರುವದು." (ಲೂಕ.1:50).

7. "ನಾವು ಮಾಡಿದ ಪುಣ್ಯಕ್ರಿಯೆಗಳ ನಿಮಿತ್ತದಿಂದಲ್ಲ ಆತನ ಕರುಣೆಯಲ್ಲಿಯೇ ಪುನರ್ಜನ್ಮವನ್ನು ಸೂಚಿಸುವ ಸ್ನಾನದ ಮೂಲಕವಾಗಿವಾಗಿಯೂ ರಕ್ಷಿಸಿದನು." (ತೀತ.3:5).

8. "ಆತನು ಕರುಣಾಳುವೂ ಅಪರಾಧಿಗಳನ್ನು ಸಂಹರಿಸದೆ ಕ್ಷಮಿಸು ವವನೂ ಆಗಿ ತನ್ನ ಸಿಟ್ಟನ್ನೆಲ್ಲಾ ಏರಗೊಡದೆ ಅದನ್ನು ಹಲವು ಸಾರಿ ತಡೆಯುತ್ತಾ ಬಂದನು." (ಕೀರ್ತ.78:38).

9. "ಆದದರಿಂದ ದೇವರ ದಯವು ಮನುಷ್ಯರಿಗೆ ಇಚ್ಛೈಸುವದ ರಿಂದಾಗಲಿ ಪ್ರಯತ್ನಿಸುವದರಿಂದಾಗಲಿ ದೊರೆಯುದೆ ದೇವರು ಕರುಣೆಸುವದರಿಂದಲೇ ದೊರೆಯುತ್ತದೆ." (ರೋಮಾ.9:16).

10."ಆದದರಿಂದ, ನಾವು ಕರುಣೆಯನ್ನು ಹೊಂದುವಂತೆಯೂ ಆತನ ದಯೆಯಿಂದ ಸಮಯೋಚಿತವಾದ ಸಹಾಯವು ನಮಗೆ ದೊರೆಯುವಂತೆಯೂ ಧೈರ್ಯದಿಂದ ಕೃಪಾಸನದ ಮುಂದೆ ಬರೋಣ." (ಇಬ್ರಿ.4:16).

## 18. ನಿತ್ಯಜೀವವನ್ನು ಕೊಡುವಾತನು!

1. "ಕ್ರಿಸ್ತನು ತಾನು ಕೊಡುತ್ತೇನೆಂದು ನಮಗೆ ವಾಗ್ದಾನ ಮಾಡಿದ್ದು ನಿತ್ಯಜೀವವು." (1 ಯೋಹಾ.2:25).

2. “ನಾನು ಅವುಗಳಿಗೆ ನಿತ್ಯಜೀವವನ್ನು ಕೊಡುತ್ತೇನೆ; ಅವು ಎಂದಿಗೂ ನಾಶವಾಗುವದೇ ಇಲ್ಲ.” (ಯೋಹಾ.10:28).

3. “ಯಾರು ಪ್ರಭಾವ ಮಾನ ನಿರ್ಲಯತ್ವಗಳನ್ನು ಹೊಂದಬೇಕೆಂದು ಒಳ್ಳೇದನ್ನು ಬೇಸರಗೊಳ್ಳದೆ ಮಾಡುತ್ತಾರೊ ಅವರಿಗೆ ನಿತ್ಯ ಜೀವವನ್ನು ಕೊಡುವನು.” (ರೋಮಾ.2:7).

4. “ಪಾಪವು ಮರಣವನ್ನುಂಟು ಮಾಡುತ್ತಾ ಅಧಿಕಾರವನ್ನು ನಡಿಸಿದ ಹಾಗೆಯೇ, ದೇವರ ಕೃಪೆಯು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ನೀತಿಯನ್ನು ಕೊಟ್ಟು ನಿತ್ಯ ಜೀವವನ್ನುಂಟು ಮಾಡುತ್ತಾ ಅಧಿಕಾರವನ್ನುನಡಿಸುವದು.” (ರೋಮಾ.5:21).

5. “ಪಾಪವು ಕೊಡುವ ಸಂಬಳ ಮರಣ; ದೇವರ ಉಚಿತಾರ್ಥವರವು ನಮ್ಮ ಕರ್ತನಾದ ಯೇಸುವಿನಲ್ಲಿರುವ ನಿತ್ಯಜೀವ” (ರೋಮಾ.6:23).

6. “ಒಬ್ಬನೇ ಸತ್ಯ ದೇವರಾಗಿರುವ ನಿನ್ನನ್ನೂ ನೀನು ಕಳುಹಿಸಿಕೊಟ್ಟ ಯೇಸು ಕ್ರಿಸ್ತನನ್ನೂ ತಿಳಿಯುವದೇ ನಿತ್ಯಜೀವವು.” (ಯೋಹಾ.17:3).

7. “ದೇವರು ನಮಗೆ ನಿತ್ಯಜೀವವನ್ನು ಅನುಗ್ರಹಿಸಿದನು. ಆ ಜೀವವು ಆತನ ಮಗನಲ್ಲಿ ಅದೆ ಎಂಬದೇ.” (1 ಯೋಹಾ.5:11).

8. “ಕ್ರಿಸ್ತನಂಬಿಕೆಯುಳ್ಳವರು ಮಾಡತಕ್ಕ ಶ್ರೇಷ್ಠ ಹೋರಾಟವನ್ನು ಮಾಡು. ನಿತ್ಯ ಜೀವವನ್ನು ಹಿಡಿದುಕೋ. ಅದಕ್ಕಾಗಿ ದೇವರು ನಿನ್ನನ್ನು ಕರೆದನು.” (1 ತಿಮೋ.6:12).

9. "ನಿತ್ಯಜೀವಕ್ಕಾಗಿ ನಮ್ಮ ಕರ್ತನಾದ ಯೇಸು ಕ್ರಿಸ್ತನ
ಕರುಣೆಯನ್ನು ಎದುರು ನೋಡುತ್ತಾ ನಿಮ್ಮನ್ನು ದೇವರ ಪ್ರೀತಿಯಲ್ಲಿ
ಕಾಪಾಡಿಕೊಳ್ಳಿರಿ." (ಯೂದ.21).

10. "ನನ್ನ ವಾಕ್ಯವನ್ನು ಕೇಳಿ ನನ್ನನ್ನು ಕಳುಹಿಸಿದಾತನನ್ನು ನಂಬು
ವವನು ನಿತ್ಯಜೀವವನ್ನು ಹೊಂದಿದ್ದಾನೆ." (ಯೋಹಾ.5:24).

## 19. ಬದುಕಿಸುವಾತನು!

1. "ಆತನು ಅಪರಾದಗಳ ಮತ್ತು ಪಾಪಗಳ ದೆಸೆಯಿಂದ
ಸತ್ತವರಾದ್ದ ನಿಮ್ಮನ್ನು ಸಹ ಬದುಕಿಸಿದನು." (ಎಫೆ.2:1).

2. "ತಂದೆಯು ಹೇಗೆ ಸತ್ತವರನ್ನು ಎಬ್ಬಿಸಿ ಬದುಕಿಸುತ್ತಾನೋ
ಹಾಗೆಯೇ ಮಗನು ಸಹ ತನಗೆ ಬೇಕಾದವರನ್ನು ಬದುಕಿಸುತ್ತಾನೆ."
(ಯೋಹಾ.5:21).

3. "ಬದುಕಿಸುವಂಥದ್ದು ಆತ್ಮವೇ; ಮಾಂಸವು ಯಾವದಕ್ಕೂ
ಬರುವದಿಲ್ಲ." (ಯೋಹಾ.6:63).

4. "ದೇವರು ಸತ್ತವರನ್ನು ಬದುಕಿಸುವವನಾಗಿಯೂ
ಇಲ್ಲದ್ದನ್ನು ಇರುವದಾಗಿ ಕರೆಯುವವನಾಗಿಯೂ ಇದ್ದಾನೆ."
(ರೋಮಾ.4:17).

5. "ಮೊದಲನೇ ಮನುಷ್ಯನಾದ ಆದಾಮನು ಬದುಕುವ ಪ್ರಾಣಿ
ಯಾದನೆಂದು ಬರೆದದೆಯಲ್ಲಾ ಕಡೇ ಆದಾಮನೋ ಬದುಕಿಸುವ
ಆತ್ಮವು." (1 ಕೊರಿ.15:45).

6. "ಲಿಖಿತರೂಪವಾದ ಒಡಂಬಡಿಕೆಯು ಮರಣವನ್ನುಂಟು ಮಾಡುತ್ತದೆ. ದೇವರಾತ್ಮ ಸಂಬಂಧವಾದದ್ದು ಜೀವವನ್ನುಂಟು ಮಾಡುತ್ತದೆ." (2 ಕೊರಿ.3:6).

7. "ದೇವರು ಸತ್ತವರನ್ನು ಬದುಕಿಸುವವನಾಗಿಯೂ ಇಲ್ಲದ್ದನ್ನು ಇರುವದಾಗಿ ಕರೆಯುವವನಾಗಿಯು ಇದ್ದಾನಲ್ಲಾ" (ರೋಮಾ.4:17).

8. "ಕ್ರಿಸ್ತಯೇಸುವನ್ನು ಸತ್ತವರೊಳಗಿಂದ ಜೀವಿತನಾಗಿ ಎಬ್ಬಿಸಿದಾತನ ಆತ್ಮನು... ನಿಮ್ಮಲ್ಲಿ ವಾಸವಾಗಿರುವ ತನ್ನ ಆತ್ಮನ ಮೂಲಕ ನಿಮ್ಮ ಮರ್ತ್ಯದೇಹಗಳನ್ನು ಸಹ ಬದುಕಿಸಿದನು." (ರೋಮಾ.8:11).

9. "ನಿನ್ನ ನುಡಿಯ ಪ್ರಕಾರ ನನ್ನನ್ನು ಉದ್ಧಾರಮಾಡು ಆಗ ಬದುಕುವೆನು." (ಕೀರ್ತ.119:116).

10."ನನ್ನನ್ನು ನಂಬುವವನು ಸತ್ತರೂ ಬದುಕುವನು; ಮತ್ತು ಬದುಕುತ್ತಾ ನನ್ನನ್ನು ನಂಬುವ ಪ್ರತಿಯೊಬ್ಬನು ಎಂದಿಗೂ ಸಾಯುವದಿಲ್ಲ." (ಯೋಹಾ.11:26).

## 20. ರಮ್ಯವಾದಾತನು!

1. "ಆಹಾ, ಎನ್ನಿನಿಯನೇ, ನೀನು ಎಷ್ಟು ಸುಂದರ, ಎಷ್ಟು ರಮ್ಯ" (ಪರಮ.1:16)

2. "ಯೆಹೋವನು ಒಳ್ಳೆಯವನು, ಆತನ ನಾಮವನ್ನು ಕೊಂಡಾಡಿರಿ. ಅದು ಮನೋಹರವಾಗಿದೆ." (ಕೀರ್ತ.135:3).

3. "ಆಹಾ, ಸಹೋದರರು ಒಂದಾಗಿರುವದು ಎಷ್ಟೋ ಒಳ್ಳೇದು, ಎಷ್ಟೋ ರಮ್ಯವಾದದ್ದು." (ಕೀರ್ತ.133:1)

4. "ಯೆಹೋವನು ಒಳ್ಳೆಯವನು. ಆತನ ನಾಮವನ್ನು ಕೊಂಡಾಡಿರಿ. ಅದು ಮನೋಹರವಾಗಿದೆ." (ಕೀರ್ತ.135:3)

5. "ನಿನ್ನ ತೈಲದ ಪರಿಮಳವು ಸಕಲಸುಗಂಧ ದ್ರವ್ಯಗಳಿಗಿಂತ ಎಷ್ಟೋ ಮನೋಹರ." (ಪರಮ.4:10)

6. "ನಾನು ಎಚ್ಚತ್ತು ನಿಜಸ್ಥಿತಿಯನ್ನು ನೋಡಿದೆನು, ಆಗ ನನ್ನ ಕನಸು ನನಗೆ ಮನೋಹರವಾಗಿ ಕಾಣಿಸಿತು." (ಯೆರೆ.31:26)

7. "ನನ್ನ ಧ್ಯಾನದಿಂದ ಆತನಿಗೆ ಮೆಚ್ಚಿಕೆಯಾಗಲಿ, ನಾನಾದರೋ ಯೆಹೋವನಲ್ಲಿ ಆನಂದಿಸುವೆನು." (ಕೀರ್ತ.104:34)

8. "ದೇವದಾರುಗಳಷ್ಟು ರಮಣೀಯವಾದ ಅವನ ಗಾಂಭೀರ್ಯವು ಲೆಬನೋನಿಗೆ ಸಮಾನ." (ಪರಮ ಗೀತ.5:15)

9. "ಪ್ರೇಮವೇ, ಸಕಲ ಸಂತೋಷಗಳಿಗಿಂತ ನೀನು ಎಷ್ಟೋ ಮನೋಹರ, ಎಷ್ಟೋ ರಮ್ಯ" (ಪರಮ.7:6)

10. "ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ. ಆತನು ಒಳ್ಳೆಯವನು." (ಕೀರ್ತ.118:29)

## 21. ಐಶ್ವರ್ಯ!

1. "ಪ್ರಭಾವೈಶ್ವರ್ಯಗಳು ನಿನ್ನ ಸನ್ನಿಧಿಯಿಂದ ಬರುತ್ತವೆ. ನೀನು ಸರ್ವಾಧಿಕಾರಿಯು ಬಲಪರಾಕ್ರಮಗಳು ನಿನ್ನ ಹಸ್ತದಲ್ಲಿರುತ್ತವೆ." (1 ಪೂರ್ವ.29:12)

2. "ನನ್ನಲ್ಲಿ ಧನಘನತೆಗಳೂ ಶ್ರೇಷ್ಠ ಸಂಪತ್ತೂ ನೀತಿಯೂ ಇರುತ್ತವೆ." (ಜ್ಞಾನೋ.8:18)

3. "ಯೆಹೋವನ ಆಶೀರ್ವಾದವು ಭಾಗ್ಯದಾಯಕವು ಅದು ವ್ಯಸನವನ್ನು ಸೇರಿಸದು." (ಜ್ಞಾನೋ.10:22)

4. "ಧನ ಮಾನ ಜೀವಗಳು ದೀನಭಾವಕ್ಕೂ ಯೆಹೋವನ ಭಯಕ್ಕೂ ಫಲ." (ಜ್ಞಾನೋ.22:4)

5. "ಆಹಾ, ದೇವರ ಐಶ್ವರ್ಯವೂ ಜ್ಞಾನವೂ ವಿವೇಕವೂ ಎಷ್ಟೋ ಅಗಾಧ"(ರೋಮಾ.11:33).

6. "ಆತನು ಐಶ್ವರ್ಯವಂತನಾಗಿದ್ದು ತಾನು ಬಡತನದಲ್ಲಿ ಸೇರುವದರಿಂದ ನೀವು ಐಶ್ವರ್ಯವಂತರಾಗ ಬೇಕೆಂದು ನಿಮಗೋಸ್ಕರ ಬಡವನಾದನು." (2 ಕೊರಿ.8:9).

7. "ನನ್ನ ದೇವರು ಕ್ರಿಸ್ತಯೇಸುವಿನ ಮೂಲಕ ತನ್ನ ಪ್ರಭಾವದ ಐಶ್ವರ್ಯಕ್ಕೆ ತಕ್ಕ ಹಾಗೆ ನಿಮ್ಮ ಪ್ರತಿಯೊಂದು ಕೊರತೆಯನ್ನು ನೀಗಿಸುವನು." (ಫಿಲಿ.4:19).

8. "ವಧಿತನಾದ ಕುರಿಯಾದಾತನು ಬಲ ಐಶ್ವರ್ಯ ಜ್ಞಾನ ಸಾಮರ್ಥ್ಯಮಾನ ಪ್ರಭಾವ ಸ್ತೋತ್ರಗಳನ್ನು ಹೊಂದುವದಕ್ಕೆ ಯೋಗ್ಯನು." (ಪ್ರಕ.5:12).

9. "ಜ್ಞಾನಿಗಳ ಜ್ಞಾನಕಿರೀಟವೇ ಅವರ ಶ್ರೇಷ್ಠ ಸಂಪತ್ತು." (ಜ್ಞಾನೋ.14:24).

10.''ಧನವಂತನಿಗೆ ಬಹು ಜನ ಮಿತ್ರರು.'' (ಜ್ಞಾನೋ.14:20).

## 22. ಹರ್ಷಗೊಳಿಸುವಾತನು!

1. ''ಆಗ ನೀನು ನನ್ನ ಗೋಳಾಟವನ್ನು ತಪ್ಪಿಸಿ ಸಂತೋಷದಿಂದ ಕುಣಿದಾಡುವಂತೆ ಮಾಡಿದಿ. ನಾನು ಕಟ್ಟಿಕೊಂಡಿದ್ದ ಗೋಣಿತಟ್ಟನ್ನು ತೆಗೆದುಬಿಟ್ಟು ಹರ್ಷ ವಸ್ತ್ರವನ್ನು ನನಗೆ ಧಾರಣೆಮಾಡಿಸಿದಿ.'' (ಕೀರ್ತ.30:11).

2. ''ಆತನ ಕೋಪವು ಕ್ಷಣಮಾತ್ರವೇ; ಆತನ ಅನುಗ್ರಹವೋ ಜೀವಮಾನವೆಲ್ಲಾ ಇರುವದು. ಸಂಜೆಗೆ ದುಃಖವೆಂಬದು ಬಂದು ನಮ್ಮ ಬಳಿಯಲ್ಲಿ ಇಳಿದು ಕೊಂಡರೂ ಮುಂಜಾನೆ ಹರ್ಷಧ್ವನಿಯು ಕೇಳಿಸುವದು.''(ಕೀರ್ತ.30:5).

3. ''ಚೀಯೋನಿನಿಂದ ಇಸ್ರಾಯೇಲ್ಯರಿಗೆ ರಕ್ಷಣೆಯು ಬೇಗನೆ ಬರಲಿ. ಯೆಹೋವನು ದುರವಸ್ಥೆಯಿಂದ ತಪ್ಪಿಸಿದಾಗ ಆತನ ಪ್ರಜೆಗಳಾಗಿರುವ ಯಾಕೋಬವಂಶದವರು ಉಲ್ಲಾಸಗೊಳ್ಳುವರು. ಇಸ್ರಾಯೇಲ್ಯರು ಹರ್ಷಿಸುವರು. (ಕೀರ್ತ.14:7).

4. ''ನಿನ್ನನ್ನು ಮರೆಹೊಕ್ಕವರೆಲ್ಲರು ಸಂತೋಷ ಪಡುವರು. ನೀನು ಕಾಪಾಡುವವನೆಂದು ಅವರು ಯಾವಾಗಲೂ ಆನಂದ ಧ್ವನಿಮಾಡುವರು. ನಿನ್ನ ನಾಮವನ್ನು ಪ್ರೀತಿಸುವವರು ನಿನ್ನಲ್ಲಿ ಉಲ್ಲಾಸಗೊಳ್ಳುವರು'' (ಕೀರ್ತ.5:12).

5. "ನೀತಿವಂತರೇ, ಯೆಹೋವನಲ್ಲಿ ಸಂತೋಷಿಸುತ್ತಾ ಉಲ್ಲಾಸವಾಗಿರ್ರಿ; ಯಥಾರ್ಥಚಿತ್ತರೇ ಆತನ ವಿಷಯದಲ್ಲಿ ಉತ್ಸಾಹ ಧ್ವನಿಮಾಡಿರಿ." (ಕೀರ್ತ.32:11).

6. "ಸಂತೋಷಪಡಿರಿ, ಉಲ್ಲಾಸಪಡಿರಿ, ಪರಲೋಕದಲ್ಲಿ ನಿಮಗೆ ಬಹಳ ಫಲ ಸಿಕ್ಕುವದು." (ಮತ್ತಾ.5:12).

7. "ಧರ್ಮಿಯ ತಂದೆಯು ಅತಿ ಸಂತೋಷ ಪಡುವನು. ಜ್ಞಾನಿಯನ್ನು ಹೆತ್ತವನು ಅವನಲ್ಲಿ ಆನಂದಿಸುವನು." (ಜ್ಞಾನೋ.23:24).

8. "ಇಸ್ರಾಯೇಲ್ಯರು ತಮ್ಮ ಸೃಷ್ಟಿ ಕರ್ತನಲ್ಲಿ ಹೆಚ್ಚಳಪಡಲಿ. ಚಿಯೋನಿನವರು ತಮ್ಮ ರಾಜನಲ್ಲಿ ಹರ್ಷಿಸಲಿ." (ಕೀರ್ತ.149:2).

9. "ನನ್ನನ್ನು ತೊಳೆ, ಆಗ ಹಿಮಕ್ಕಿಂತಲೂ ಬೆಳ್ಳಗಾಗುವೆನು. ನನ್ನಲ್ಲಿ ಸಂಭ್ರಮೋತ್ಸವ ಧ್ವನಿ ಉಂಟಾಗುವಂತೆ ಮಾಡು, ಆಗ ನೀನು ಜಜ್ಜಿದ ಎಲುಬುಗಳು ಆನಂದಪಡುವವು."(ಕೀರ್ತ.51:7).

10. "ನಾನು ಮಾಡುವ ಸೃಷ್ಟಿ ಕಾರ್ಯದಲ್ಲಿಯೇ ಹರ್ಷಗೊಂಡು ಸದಾ ಉಲ್ಲಾಸಿಸಿರಿ. ಆಹಾ, ನಾನು ಯೆರೂಸಲೇಮನ್ನು ಉಲ್ಲಾಸದ ನಿವಾಸವನ್ನಾಗಿ ಅದರ ಜನರನ್ನು ಹರ್ಷಭರಿತರನ್ನಾಗಿಯೂ ಮಾಡುವೆನು." (ಯೆಶಾ.65:18)

## 23. ಸನ್ಮಾನ ಮಾಡುವನು!

1. "ನೀನು ನನ್ನ ದೃಷ್ಟಿಯಲ್ಲಿ ಅಮೂಲ್ಯನೂ ಮಾನ್ಯನೂ ಪ್ರಿಯನೂ ಆಗಿರುವದರಿಂದ ನಾನು ನಿನಗೆ ಬದಲಾಗಿ ಮನುಷ್ಯರನ್ನೂ

ನಿನ್ನ ಪ್ರಾಣಕ್ಕೆ ಪ್ರತಿಯಾಗಿ ಜನಾಂಗಗಳನ್ನೂ ಕೊಡುವೆನು.'' (ಯೆಶಾ.43:4).

2. ''ಒಳ್ಳೇದನ್ನು ನಡಿಸುವ ಪ್ರತಿಯೊಬ್ಬನಿಗೆ ಪ್ರಭಾವವೂ ಮಾನವೂ ಮನಶ್ಶಾಂತಿಯೂ ಉಂಟಾಗುವವು.'' (ರೋಮಾ.2:10).

3. ''ಅಂಜೂರದ ಮರವನ್ನು ಕಾಯುವವನು ಅದರ ಫಲವನ್ನು ತಿನ್ನುವನು. ಯಜಮಾನನ ಮಾತಿಗೆ ಕಾಯುವವನು ಮಾನವನ್ನನುಭವಿಸುವನು.'' (ಜ್ಞಾನೋ.27:18).

4. ''ಯಾವನಾದರೂ ನನ್ನ ಸೇವೆಯನ್ನು ಮಾಡುವವನಾದರೆ ತಂದೆಯು ಅವನಿಗೆ ಬಹುಮಾನ ಮಾಡುವನು.'' (ಯೋಹಾ.12:26).

5. ''ಜ್ಞಾನವಂತರು ಸನ್ಮಾನಕ್ಕೆ ಬಾಧ್ಯರಾಗುವರು. ಜ್ಞಾನಹೀನರಿಗಾಗುವ ಬಹುಮಾನವು ಅವಮಾನವೇ.'' (ಜ್ಞಾನೋ.3:35).

6. ''ಕರ್ತನಲ್ಲಿ ಭಯಭಕ್ತಿಯುಳ್ಳವಳೇ ಸ್ತೋತ್ರ ಪಾತ್ರಳು'' (ಜ್ಞಾನೋ.31:30).

7. ''ನೀನು ನನ್ನ ದೃಷ್ಟಿಯಲ್ಲಿ ಅಮೂಲ್ಯನೂ ಮಾನ್ಯನೂ ಪ್ರಿಯನೂ ಆಗಿರುವದರಿಂದ ನಾನುನಿನಗೆ ಬದಲಾಗಿ ಮನುಷ್ಯರನ್ನೂನಿನ್ನ ಪ್ರಾಣಕ್ಕೆ ಪ್ರತಿಯಾಗಿ ಜನಾಂಗಗಳನ್ನೂ ಕೊಡುವೆನು.'' (ಯೆಶಾ.43:4).

8. ''ದೇವರಿಗೆ ಭಯಪಡಿರಿ, ಅರಸನನ್ನು ಸನ್ಮಾನಿಸಿರಿ.'' (1ಪೇತ್ರ.2:17).

9. ''ಅವನು ನನಗೆ ಮೊರೆಯಿಡುವಾಗ ಸದುತ್ತರವನ್ನು ದಯಪಾಲಿಸುವೆನು. ಇಕ್ಕಟ್ಟಿನಲ್ಲಿ ಹತ್ತಿರವಿದ್ದು ಅವನನ್ನು ತಪ್ಪಿಸಿ ಘನಪಡಿಸುವೆನು.'' (ಕೀರ್ತ.91:15).

10.''ದೇವರು ಒಬ್ಬನಿಗೆ ಯಾವ ಇಷ್ಟಾರ್ಥಕ್ಕೂ ಕೊರತೆಯಿಲ್ಲದಂತೆ ಧನಸಂಪತ್ತನ್ನೂ ಘನತೆಯನ್ನೂ ಅನುಗ್ರಹಿಸುವನು.'' (ಪ್ರಸಂಗಿ.6:1).

## 24. ದೀನರ ರಕ್ಷಣಾ ಕರ್ತನು!

1. ''ದಿಕ್ಕಿಲ್ಲದವರು ಕಡೆಯವರೆಗೆ ಮರೆಯಲ್ಪಡುವದಿಲ್ಲ ದೀನರ ನಿರೀಕ್ಷೆಯು ಕೆಡುವದೇ ಇಲ್ಲ'' (ಕೀರ್ತ.9:18).

2. ''ನೀನು ದೀನರಿಗೆ ಕೋಟೆ, ಇಕ್ಕಟ್ಟಿನಲ್ಲಿ ದರಿದ್ರರಿಗೆ ರಕ್ಷಣದುರ್ಗ; ಬಿಸಿಲಿಗೆ ನೆರಳು, ಬೀಕರರ ಶ್ವಾಸವು ಗೋಡೆಗೆ ಬಡಿದುಬಿಡುವ ಬಿರುಗಾಳಿಯಂತಿರುವಾಗ ಆಶ್ರಯವೂ ಆಗಿದ್ದೀ.'' (ಯೆಶಾ.25:4).

3. ''ಆತನು ದೀನರನ್ನು ಧೂಳಿಯಿಂದ ಎಬ್ಬಿಸಿ ಬಡವರನ್ನು ತಿಪ್ಪೆಯಿಂದ ಎತ್ತುತ್ತಾನೆ.'' (ಕೀರ್ತ.113:7).

4. ''ಯೆಹೋವನನ್ನು ಕೀರ್ತಿಸಿರಿ, ಯೆಹೋವನನ್ನು ಸ್ತುತಿಸಿರಿ. ಆತನು ಕೆಡುಕರ ಕೈಯಿಂದ ದೀನರ ಪ್ರಾಣವನ್ನು ರಕ್ಷಿಸಿದ್ದಾನೆ.'' (ಯೆರೆ.20:13).

5. "ಬಡವರಿಗೆ ದಯೆತೋರಿಸುವವನು ಯೆಹೋವನಿಗೆ ಸಾಲ ಕೊಡುವವನು." (ಜ್ಞಾನೋ.19:17).

6. "ಕಷ್ಟದಲ್ಲಿದ್ದ ದೀನರನ್ನು ಉನ್ನತಸ್ಥಿತಿಗೇರಿಸಿ ಕುರಿಹಿಂಡಿನಂತೆ ಹೆಚ್ಚಿಸಿದನು." (ಕೀರ್ತ.107:41).

7. "ದೀನರು ಯೆಹೋವನಲ್ಲಿ ಹೆಚ್ಚು ಹೆಚ್ಚಾಗಿ ಆನಂದಿಸುವರು, ಬಡವರು ಇಸ್ರಾಯೇಲ್ಯರ ಸದಮಲಸ್ವಾಮಿಯಲ್ಲಿ ಉಲ್ಲಾಸಿಸುವರು." (ಯೆಶಾ.29:19).

8. "ದೀನದರಿದ್ರರ ಮೇಲೆ ಕರುಣೆಯುಳ್ಳವನಾಗಿ ಅವರ ಪ್ರಾಣವನ್ನು ಸಂತೈಸುವವನು." (ಕೀರ್ತ.72:13).

9. "ನಾನಾದರೋ ಕುಗ್ಗಿದವನೂ ದಿಕ್ಕಿಲ್ಲದವನೂ ಆಗಿದ್ದೇನೆ. ದೇವರೇ ಶೀಘ್ರವಾಗಿ ಬಾ" (ಕೀರ್ತ.70:5).

10."ಬಾಯಿ ತೆರೆದು ಧರ್ಮವನ್ನು ನಡಿಸು, ದೀನದರಿದ್ರರಿಗೆ ನ್ಯಾಯವನ್ನು ತೀರಿಸು." (ಜ್ಞಾನೋ.31:9).

## 25. ಯೆಹೋವನು ನಂಬಿಗಸ್ತನು!

1. "ಯೆಹೋವನು ನಂಬಿಗಸ್ತನು, ಆತನುನಿಮ್ಮನ್ನು ದೃಢಪಡಿಸಿ ನೀವು ಕೆಡುಕನ ಕೈಗೆ ಸಿಕ್ಕದಂತೆ ಕಾಪಾಡುವನು." (2 ಥೆಸ.3:3).

2. "ದೇವರು ನಂಬಿಗಸ್ತನು, ನಮ್ಮ ಕರ್ತನಾದ ಯೇಸುಕ್ರಿಸ್ತನೆಂಬ ತನ್ನ ಮಗನ ಅನ್ಯೋನ್ಯತೆಗೆ ನಿಮ್ಮನ್ನು ಕರೆದವನು ಆತನೇ." (1 ಕೊರಿ.1:9).

3. "ನಮ್ಮ ಪಾಪಗಳನ್ನು ಒಪ್ಪಿಕೊಂಡು ಅರಿಕೆ ಮಾಡಿದರೆ ಆತನು ನಂಬಿಗಸ್ತನೂ ನೀತಿವಂತನೂ ಆಗಿರುವವರಿಂದ ನಮ್ಮ ಪಾಪಗಳನ್ನು ಕ್ಷಮಿಸಿಬಿಟ್ಟು ಸಕಲ ಅನೀತಿಯನ್ನು ಪರಿಹರಿಸಿ ನಮ್ಮನ್ನು ಶುದ್ಧಿಮಾಡುವನು" (1 ಯೋಹಾ.1:9).

4. "ದೇವರು ನಂಬಿಗಸ್ತನು ನಿಮ್ಮ ಶಕ್ತಿಯನ್ನು ಮಿರುವ ಶೋಧನೆಯನ್ನು ನಿಮಗೆ ಬರಗೊಡಿಸದೆ ನೀವು ಅದನ್ನು ಸಹಿಸುವದಕ್ಕೆ ಶಕ್ತರಾಗುವಂತೆ ಶೋಧನೆಯಾಗುತ್ತಲೇ ತಪ್ಪಿಸಿಕೊಳ್ಳುವ ಮಾರ್ಗವನ್ನು ಸಿದ್ಧಮಾಡುವನು" (1 ಕೊರಿ.10;13).

5. "ಆತನು ನಂಬಿಗಸ್ತನಾದ ದೇವರು, ತನ್ನನ್ನು ಪ್ರೀತಿಸಿ ತನ್ನ ಆಜ್ಞೆಗಳನ್ನು ಅನುಸರಿಸುವವರಿಗೆ ಮಾಡಿದ ವಾಗ್ದಾನವನ್ನೂ ಕೃಪೆಯನ್ನೂ ಅವರ ಸಂತತಿಯವರಲ್ಲಿ ಸಾವಿರ ತಲೆಗಳವರೆಗೂ ನೆರವೇರಿಸುವವನಾಗಿದ್ದಾನೆ" (ಧರ್ಮೋ.7:9).

6. "ಯೆಹೋವನು ಒಳ್ಳೆಯವನು ಆತನ ಕೃಪೆಯು ಯುಗಯುಗಕ್ಕೂ ಆತನ ಸತ್ಯತೆಯು ತಲತಲಾಂತರಕ್ಕೂ ಇರುವದು" (ಕೀರ್ತ.100:5).

7. "ನಿಮ್ಮನ್ನು ಕರೆಯುವವನು ನಂಬಿಗಸ್ತನು. ಆತನು ತನ್ನ ಕಾರ್ಯವನ್ನು ಸಾಧಿಸುವನು." (1ಥೆಸ.5:24).

8. "ಕರ್ತನು ನಂಬಿಗಸ್ತನು; ಆತನು ನಿಮ್ಮನ್ನು ದೃಢಪಡಿಸಿ ನೀವು ಕೆಡುಕನ ಕೈಗೆ ಸಿಕ್ಕದಂತೆ ಕಾಪಾಡುವನು." (2 ಥೆಸ.3:3).

9. "ನಾವು ಅಪನಂಬಿಗಸ್ತರಾಗಿದ್ದರೂ ಆತನು ನಂಬಿಗಸ್ತನಾಗಿಯೇ ಇರುವನು." (2 ತಿಮೊ.2:13).

10. "ವಾಗ್ದಾನಮಾಡಿದಾತನು ನಂಬಿಗಸ್ತನು." (ಇಬ್ರಿ.10:23)

## 26. ಸೌಖ್ಯವನ್ನು ಅನುಗ್ರಹಿಸುವಾತನು!

1. "ಇಗೋ, ನಾನು ಈ ಪಟ್ಟಣವನ್ನು ಜೀರ್ಣೋದ್ಧಾರಮಾಡಿ ಅದಕ್ಕೆ ಸೌಖ್ಯವನ್ನು ಕೊಟ್ಟು ನಿವಾಸಿಗಳನ್ನು ಗುಣಪಡಿಸುವೆನು." (ಯೆರೆ.33:6).

2. "ನನ್ನ ನಾಮದಲ್ಲಿ ಭಯಭಕ್ತಿಯಿಟ್ಟಿರುವ ನಿಮಗಾದರೋ ದೇವರ ಧರ್ಮವೆಂಬ ಸೂರ್ಯನು ಸ್ವಸ್ಥತೆಯನ್ನುಂಟುಮಾಡುವ ಕಿರಣಗಳುಳ್ಳವನಾಗಿ ಮೂಡುವನು." (ಮಲಾ.4:2).

3. "ಆತನ ಆಜ್ಞೆಗಳಿಗೆ ವಿಧೇಯರಾಗಿದ್ದು ಆತನ ಕಟ್ಟಳೆಗಳನ್ನೆಲ್ಲಾ ಅನುಸರಿಸಿ ನಡೆದರೆ ನಾನು ಐಗುಪ್ತ್ಯರಿಗೆ ಉಂಟುಮಾಡಿದ ವ್ಯಾಧಿಗಳಲ್ಲಿ ಒಂದನ್ನೂ ನಿಮಗೆ ಬರಗೊಡಿಸುವದಿಲ್ಲ ನಾನೇ ನಿಮಗೆ ಆರೋಗ್ಯದಾಯಕನು." (ವಿಮೋ.15:26).

4. "ನಿಮ್ಮ ದೇವರಾದ ಯೆಹೋವನೊಬ್ಬನನ್ನೇ ಆರಾಧಿಸಬೇಕು. ಆಗ ಆತನು ನಿಮ್ಮ ಅನ್ನಪಾನಗಳನ್ನು ಆಶೀರ್ವದಿಸುವನು. ನಿಮ್ಮೊಳಗೆ ಯಾವ ವ್ಯಾಧಿಯೂ ಉಂಟಾಗದಂತೆ ಮಾಡುವನು." (ವಿಮೋ.23:25).

5. "ಕ್ರಿಸ್ತಯೇಸುವನ್ನು ಸತ್ತವರೊಳಗಿಂದ ಎಬ್ಬಿಸಿದಾತನು ನಿಮ್ಮಲ್ಲಿ ವಾಸವಾಗಿರುವ ತನ್ನ ಆತ್ಮನ ಮೂಲಕ ನಿಮ್ಮ ಮರ್ತ್ಯದೇಹಗಳನ್ನು ಸಹ ಬದುಕಿಸುವನು." (ರೋಮಾ.8:11).

6. "ನಿಮ್ಮಲ್ಲಿ ಅಸ್ವಸ್ಥನಾದವನು ಇದ್ದಾನೋ? ಅವನು ಸಭೆಯ ಹಿರಿಯರನ್ನು ಕರೇಕಳುಹಿಸಲಿ ಅವರು ಕರ್ತನ ಹೆಸರಿನಿಂದ ಅವನಿಗೆ ಎಣ್ಣೆ ಹಚ್ಚಿ ಅವನಿಗೋಸ್ಕರ ದೇವರನ್ನು ಪ್ರಾರ್ಥಿಸಲಿ ನಂಬಿಕೆಯಿಂದ ಮಾಡಿದ ಪ್ರಾರ್ಥನೆಯು ರೋಗಿಯನ್ನು ರಕ್ಷಿಸುವದು." (ಯಾಕೋ.5:14,15).

7. "ನಮ್ಮ ಬೇನೆಗಳನ್ನು ತಾನೇ ತೆಗೆದುಕೊಂಡು ನಮ್ಮ ರೋಗಗಳನ್ನು ಹೊತ್ತುಕೊಂಡನು." (ಮತ್ತಾ.8:17).

8. "ಆತನು ನಮ್ಮ ಪಾಪಗಳನ್ನು ತಾನೇ ತನ್ನ ದೇಹದಲ್ಲಿ ಹೊತ್ತುಕೊಂಡು ಮರಣದ ಕಂಬವನ್ನು ಏರಿದನು. ಆತನ ಬಾಸುಂಡೆಗಳಿಂದ ನಿಮಗೆ ಗುಣವಾಯಿತು." (1 ಪೇತ್ರ.2:24).

9. "ಮಗಳೇ, ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು. ಸಮಾಧಾನದಿಂದ ಹೋಗು; ನಿನ್ನನ್ನು ಕಾಡಿದ ರೋಗವು ಹೋಗಿ ನಿನಗೆ ಗುಣವಾಗಲಿ." (ಮಾರ್ಕ.5:34).

10. "ಆತನು ಕನಿಕರಪಟ್ಟು ಕೈ ನೀಡಿ ಅವನನ್ನು ಮುಟ್ಟಿ - ನನಗೆ ಮನಸ್ಸುಂಟು ಶುದ್ಧವಾಗು ಅಂದನು." (ಮಾರ್ಕ.1:41).

## 27 ಸ್ಥಿರಪಡಿಸುವಾತನು!

1. ''ನನ್ನ ಹಸ್ತವು ಅವನ ಮೇಲೆ ಸ್ಥಿರವಾಗಿರುವದು. ನನ್ನ ಭುಜವು ಅವನನ್ನು ಬಲಪಡಿಸುವದು.'' (ಕೀರ್ತ.89:21).

2. ''ಭೂಲೋಕವು ಸ್ಥಿರವಾಗಿರುವದು ಕದಲುವದಿಲ್ಲ.'' (ಕೀರ್ತ.93:1).

3. ''ಸ್ಥಿರಚಿತ್ತನನ್ನು ಶಾಂತಿಯಲ್ಲಿ ನೆಲೆಗೊಳಿಸಿಕಾಯುವಿ. ಅವನಿಗೆ ನಿನ್ನಲ್ಲಿ ಭರವಸವಿದೆ.'' (ಯಶಾಯ 26:3).

4. ''ಪೂರ್ವದಿಂದಲೂ ನಿನ್ನ ಸಿಂಹಾಸನವು ಸ್ಥಿರವಾಗಿದೆ. ಅನಾದಿಯಿಂದಲೂ ನೀನು ಇದ್ದೀ.'' (ಕೀರ್ತ.93:2).

5. ''ನನ್ನ ಪ್ರಿಯ ಸಹೋದರರೇ ಸ್ಥಿರಚಿತ್ತರಾಗಿಯೂ ನಿಶ್ಚಲರಾಗಿಯೂ ಇರ್ರಿ. ನೀವು ಕರ್ತನ ಸೇವೆಯಲ್ಲಿ ಪಡುವ ಪ್ರಯಾಸವು ನಿಷ್ಫಲವಾಗುವದಿಲ್ಲವೆಂದು ತಿಳಿದು ಕರ್ತನ ಕೆಲಸವನ್ನು ಯಾವಾಗಲೂ ಅತ್ಯಾಸಕ್ತಿಯಿಂದ ಮಾಡುವವರಾಗಿರ್ರಿ.'' (1 ಕೊರಿ.15:58).

6. ''ನಿನ್ನ ಸತ್ಯತೆಯು ತಲತಲಾಂತರಕ್ಕೂ ಇರುವದು. ನೀನು ಭೂಮಿಯನ್ನು ಸ್ಥಾಪಿಸಿರುತ್ತೀ; ಅದು ಕದಲುವದಿಲ್ಲ.'' (ಕೀರ್ತ.119:90).

7. ''ನಾನು ಶರೀರದಿಂದ ನಿಮ್ಮ ಬಳಿಯಲ್ಲಿ ಇಲ್ಲದಿದ್ದರೂ ಆತ್ಮನಿಂದ ನಿಮ್ಮೊಂದಿಗಿದ್ದು ನೀವು ಕ್ರಮವಾಗಿ ನಡೆಯುವದನ್ನೂ ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ ನಿಂತಿರುವದನ್ನೂ ನೋಡಿ ಸಂತೋಷಪಡುತ್ತೇವೆ. '' (ಕೊಲೊ.2:5).

8. "ದೇವರ ಸ್ಥಿರವಾದ ಅಸ್ತಿವಾರವು ನಿಲ್ಲುತ್ತದೆ." (2 ತಿಮೊ.2:19).

9. "ಈ ಹೊತ್ತು ಎಂಬ ಕಾಲವು ಇರುವ ತನಕ ಪ್ರತಿನಿತ್ಯವೂ ಒಬ್ಬರನ್ನೊಬ್ಬರೂ ಎಚ್ಚರಿಸಿರಿ. ಮೊದಲಿಂದಿರುವ ಭರವಸವನ್ನು ಅಂತ್ಯದವರೆಗೂ ದೃಢವಾಗಿ ಹಿಡುಕೊಳ್ಳುವ ಪಕ್ಷಕ್ಕೆ ಕ್ರಿಸ್ತನಲ್ಲಿ ಪಾಲುಗಾರರಾಗಿದ್ದೇವಲ್ಲಾ" (ಇಬ್ರಿ.13:14).

10. "ಸಹೋದರರರೇ, ದೇವರು ನಿಮ್ಮನ್ನು ಕರೆದದ್ದನ್ನೂ ಆದುಕೊಂಡದ್ದನ್ನೂ ದೃಢಪಡಿಸಿಕೊಳ್ಳುವದಕ್ಕೆ ಮತ್ತಷ್ಟು ಪ್ರಯಾಸ ಪಡಿರಿ." (2 ಪೇತ್ರ.1:10).

## 28. ಸಹಾಯ ಮಾಡುವಾತನು!

1. "ಭೂಮ್ಯಾಕಾಶಗಳನ್ನು ನಿರ್ಮಿಸಿದ ಯೆಹೋವನಿಂದಲೇ ನನ್ನ ಸಹಾಯವು ಬರುತ್ತದೆ." (ಕೀರ್ತ.121:2).

2. "ಯೆಹೋವನು ನನಗೆ ಬಲವು ಗುರಾಣಿಯೂ ಆಗಿದ್ದಾನೆ. ನಾನು ಆತನಲ್ಲಿ ಭರವಸವಿಟ್ಟೆನು. ನನಗೆ ಸಹಾಯವು ಉಂಟಾಯಿತು." (ಕೀರ್ತ.28:7).

3. "ಇಗೋ ದೇವರೇ ನನಗೆ ಸಹಾಯಕನು; ಯೆಹೋವನೇ ನನ್ನ ಪ್ರಾಣವನ್ನು ಕಾಪಾಡುವವನು." (ಕೀರ್ತ.54:4).

4. "ನಾನೇ ನಿನ್ನ ದೇವರು, ನಾನು ನಿನ್ನನ್ನು ಬಲಪಡಿಸುತ್ತನೆ. ಹೌದು, ನಿನಗೆ ಸಹಾಯಕೊಡುತ್ತೇನೆ." (ಯೆಶಾ.41:10).

5. "ಯೆಹೋವನು ನನ್ನ ಸಹಾಯಕನು, ಭಯಕಪಡೆನು ಮನುಷ್ಯನು ನನಗೆ ಏನು ಮಾಡಾನು?" (ಇಬ್ರಿ.13:6).

6. "ಆತನು ಆಕಾಶವನ್ನೇರಿ ಮೇಘಾರೂಢನಾಗಿ ಮಹಾ ಗಾಂಭೀರ್ಯದಿಂದ ನಿಮ್ಮ ಸಹಾಯಕ್ಕೆ ಬರುವನು." (ಧರ್ಮೋ.33:26).

7. "ನಾವು ಕರುಣೆಯನ್ನು ಹೊಂದುವಂತೆಯೂ ಆತನ ದಯೆಯಿಂದ ಸಮಯೋಚಿತವಾದ ಸಹಾಯವು ನಮಗೆ ದೊರೆಯುವಂತೆಯೂ ಧೈರ್ಯದಿಂದ ಕೃಪಾಸನದ ಮುಂದೆ ಬರೋಣ." (ಇಬ್ರಿ.4:16).

8. "ನೀನೇ ನನಗೆ ಸಹಾಯಕನಾಗಿದ್ದೆಯಲ್ಲವೇ; ನನ್ನನ್ನು ರಕ್ಷಿಸಿದ ದೇವರೇ ಕೈಬಿಡಬೇಡ, ತೊರೆದುಬಿಡಬೇಡ." (ಕೀರ್ತ.27:9).

9. "ನಿನ್ನ ದಾಸನಿಗೆ ವಿಮುಖನಾಗಬೇಡ; ಇಕ್ಕಟ್ಟಿನಲ್ಲಿದ್ದೇನೆ. ತಡಮಾಡದೆ ಸಹಾಯಕೊಡು."(ಕೀರ್ತ.69:17).

10."ನಮ್ಮ ಮನಸ್ಸು ಯೆಹೋವನಿಗೋಸ್ಕರ ಕಾದಿದೆ. ನಮ್ಮ ಸಹಾಯವೂ ಗುರಾಣಿಯು ಆತನೇ." (ಕೀರ್ತ.33:20).

## 29. ಅನಾದಿ ದೇವರು!

1. "ಆದಿಯಿಂದಲೂ ದೇವರೇ ನಿಮಗೆ ನಿವಾಸಸ್ಥಾನವಾಗಿದ್ದಾನಲ್ಲಾ; ಸದಾ ದೇವರ ಹಸ್ತವೇ ನಿಮಗೆ ಆಧಾರ." (ಧರ್ಮೋ.33:27).

2. "ಇಸ್ರಾಯೇಲ್ಯರ ದೇವರಾದ ಯೆಹೋವನಿಗೆ ಯುಗಯುಗಾಂತರಗಳವರೆಗೂ ಕೊಂಡಾಟವಾಗಲಿ." (ಕೀರ್ತ.41:13).

3. "ಭೂಮಿಯೂ ಅದರ ದೇಶಗಳೂ ನಿರ್ಮಾಣವಾಗುವದಕ್ಕಿಂತ ಮುಂಚಿನಿಂದ ಯುಗಯುಗಾಂತರಗಳಲ್ಲಿಯೂ ನೀನೇ ದೇವರು." (ಕೀರ್ತ.90:2).

4. "ಪೂರ್ವದಿಂದಲೂ ನಿನ್ನ ಸಿಂಹಾಸನವು ಸ್ಥಿರವಾಗಿದೆ ಅನಾದಿಯಿಂದ ನೀನು ಇದ್ದೀ." (ಕೀರ್ತ.93:2).

5. "ಆದಿಯಿಂದ ಈಗಿನವರೆಗೂ ತಲತಲಾಂತರಗಳನ್ನು ಬರಮಾಡುವವನಾದ ಯೆಹೋವನೆಂಬ ನಾನೇ, ಹೌದು, ಆದಿಪುರುಷನೂ ಅಂತ್ಯಕಾಲದವರ ಸಂಗಡಿಗನೂ ಆಗಿರುವ ನಾನೊಬ್ಬನೇ." (ಯೆಶಾ.41:4).

6. "ಆ ವಾಕ್ಯವೆಂಬವನು ಆದಿಯಲ್ಲಿ ದೇವರ ಬಳಿಯಲ್ಲಿ ದ್ದನು."(ಯೋಹಾ.1:2).

7. "ಇಸ್ರಾಯೇಲನ್ನು ಆಳತಕ್ಕವನು ನಿನ್ನೊಳಗಿಂದ ನನಗಾಗಿ ಹೊರಡುವನು; ಆತನ ಹೊರಡೋಣದ ಮೂಲವು ಪುರಾತನವೂ ಅನಾದಿಯೂ ಆದದ್ದು." (ಮೀಕ.5:2).

8. "ಪ್ರಾರಂಭದಲ್ಲಿ, ಭೂಮಿಯು ಹುಟ್ಟುವದಕ್ಕಿಂತ ಮುಂಚೆ ಅನಾದಿಕಾಲದಲ್ಲಿ ಸ್ಥಾಪಿಸಲ್ಪಟ್ಟೆನು." (ಜ್ಞಾನೋ.8:23).

9. "ಭೂಮಿಯ ಮೊದಲನೆಯ ಅಣುರೇಣನ್ನಾಗಲಿ ನಿರ್ಮಿಸದೆ ಇರುವಾಗ ನಾನು ಹುಟ್ಟಿದೆನು." (ಜ್ಞಾನೋ.8:26).

10.''ತಂದೆಗಳೇ ಆದಿಯಿಂದಿರುವಾತನನ್ನು ನೀವು ಬಲ್ಲವರಾಗಿರುವದರಿಂದ ನಿಮಗೆ ಬರೆದಿದ್ದೇನೆ.'' (1 ಯೋಹಾ.2:14).

## 30. ಕೃಪಾಸಂಪನ್ನನು!

1. ''ಯಾವನಮೇಲೆ ದಯೆಯಿಡುವೆನೋ ಅವನ ಮೇಲೆ ದಯೆಯಿಡುವೆನು. ಯಾರನ್ನು ಕರುಣಿಸುವೆನೋ ಅವರನ್ನು ಕರುಣಿಸುವೆನು.'' (ವಿಮೋ.33:19).

2. ''ಯೆಹೋವನು ಪ್ರಸನ್ನಮುಖದಿಂದ ನಿಮ್ಮನ್ನು ನೋಡಿ ನಿಮ್ಮ ಮೇಲೆ ದಯೆವಿಡಲಿ. ನಿಮ್ಮ ಮೇಲೆ ಕೃಪಾಕಟಾಕ್ಷವಿಟ್ಟು ಶಾಂತಿಯನ್ನೂ ಅನುಗ್ರಹಿಸಲಿ.'' (ಅರಣ್ಯ.6:26).

3. ''ನನ್ನ ಕೃಪೆಯೇ ನಿನಗೆ ಸಾಕು. ಬಲಹೀನತೆಯಲ್ಲಿಯೇ ಬಲವು ಪೂರ್ಣಸಾಧಕವಾಗುತ್ತದೆ.'' (2 ಕೊರಿ.12:9).

4. ''ನಾವೆಲ್ಲರೂ ಆತನ ಪರಿಪೂರ್ಣತೆಯೊಳಗಿಂದ ಕೃಪೆಯ ಮೇಲೆ ಕೃಪೆಯನ್ನು ಹೊಂದಿದೆವು.'' (ಯೋಹಾ.1:17).

5. ''ಹೆದರಬೇಡ, ನಿನಗೆ ದೇವರ ದಯೆ ದೊರಕಿತು.'' (ಲೂಕ.1:30).

6. ''ನಿನ್ನ ಕೃಪೆಯು ಆಕಾಶವನ್ನೂ ನಿನ್ನ ಸತ್ಯತೆಯು ಮುಗಿಲನ್ನು ನಿಲುಕುವಷ್ಟು ದೊಡ್ಡದಾಗಿದೆ.'' (ಕೀರ್ತ.57:10).

7. "ಉದಯದಲ್ಲಿ ನಿನ್ನ ಕೃಪೆಯಿಂದ ನಮ್ಮನ್ನು ಸಂತೃಪ್ತಿಪಡಿಸು. ಆಗ ಜೀವಮಾನದಲ್ಲೆಲ್ಲಾ ಉಲ್ಲಾಸಿಸಿ ಹರ್ಷಿಸುವೆವು." (ಕೀರ್ತ.90:14).

8. "ಯೆಹೋವನಲ್ಲಿ ಭರವಸವಿಟ್ಟವರನ್ನು ಆತನ ಕೃಪೆಯು ಆವರಿಸಿಕೊಳ್ಳುವದು." (ಕೀರ್ತ.32:10).

9. "ನಿನ್ನ ಕೃಪೆಯನ್ನು ನನ್ನ ದೃಷ್ಟಿಯಲ್ಲೇ ಇಟ್ಟುಕೊಂಡಿದ್ದೇನೆ. ನಿನ್ನ ಸತ್ಯದಲ್ಲಿ ನಡೆದುಕೊಂಡಿದ್ದೇನೆ." (ಕೀರ್ತ.26:3).

10. "ನಿಶ್ಚಯವಾಗಿ ನನ್ನ ಜೀವಮಾನದಲ್ಲೆಲ್ಲಾ ಶುಭವೂ ಕೃಪೆಯೂ ನನ್ನನ್ನು ಹಿಂಬಾಲಿಸುವವು." (ಕೀರ್ತ.23:6).

## 31. ಜಯಕೊಡುವಾತನು!

1. "ನಮ್ಮ ದೇವರು ನಮ್ಮ ಕರ್ತನಾದ ಯೇಸುಕ್ರಿಸ್ತನ ಮೂಲಕ ನಮಗೆ ಜಯವನ್ನು ಕೊಟ್ಟಿದ್ದಾನೆ." (1 ಕೊರಿ.15:57).

2. "ಲೋಕದಲ್ಲಿ ನಿಮಗೆ ಸಂಕಟವುಂಟು; ಧೈರ್ಯವಾಗಿರಿ; ನಾನು ಲೋಕವನ್ನು ಜಯಿಸಿದ್ದೇನೆ." (ಯೋಹಾ.16:33).

3. "ಅರಸುಗಳಿಗೆ ಜಯಪ್ರದನೂ ಸೇವಕನಾದ ದಾವೀದನನ್ನು ಹಾನಿಕರವಾದ ಕತ್ತಿಗೆ ತಪ್ಪಿಸಿದವನು ನೀನೇ." (ಕೀರ್ತ.144:10).

4. "ದೇವರಿಂದ ಹುಟ್ಟಿರುವಂಥದ್ದೆಲ್ಲವು ಲೋಕವನ್ನು ಜಯಿಸುತ್ತದೆ. ಲೋಕವನ್ನು ಜಯಿಸಿದಂಥದ್ದು ನಮ್ಮ ನಂಬಿಕೆಯೇ." (1 ಯೋಹಾ.5:4).

5. ''ಅಶ್ವಬಲವು ಯುದ್ಧದಿನಕ್ಕಾಗಿ ಸನ್ನದ್ಧವಾಗಿದ್ದರೂ ಜಯವು ಕರ್ತನಿಂದಲೇ'' (ಜ್ಞಾನೋ.21:31).

6. ''ಕರ್ತಾ, ಮಹಿಮಾ ಪ್ರತಾಪ ವೈಭವ ಪರಾಕ್ರಮ ಪ್ರಭಾವಗಳು ನಿನ್ನವು. ಭೂಮ್ಯಾಕಾಶಗಳಲ್ಲಿರುವದೆಲ್ಲಾ ನಿನ್ನದೇ, ಯೆಹೋವನೇ, ರಾಜ್ಯ ನಿನ್ನದೆ.'' (1 ಪೂರ್ವ.29:11).

7. ''ಕರ್ತರ ಕರ್ತನೂ ರಾಜಾಧಿರಾಜನೂ ಆಗಿರುವದರಿಂದ ಅವರನ್ನು ಜಯಿಸುವನು. ಮತ್ತು ದೇವರು ಕರೆದವರೂ ದೇವರಾದುಕೊಂಡವರೂ ನಂಬಿಗಸ್ತರೂ ಆಗಿರುವ ಆತನ ಕಡೆಯವರು ಆ ಜಯದಲ್ಲಿ ಪಾಲುಗಾರರಾವರು.'' (ಪ್ರಕ.17:14).

8. ''ಯಜ್ಞದ ಕುರಿಯಾದಾತನ ರಕ್ತದ ಬಲದಿಂದಲೂ ತಮ್ಮ ವಾಕ್ಯದ ಬಲದಿಂದಲೂ ಅವನನ್ನು (ಸೈತಾನನನ್ನು) ಜಯಿಸಿದರು.'' (ಪ್ರಕ.12:11).

9. ''ಜಯಹೊಂದುವವನು ಇವುಗಳಿಗೆ ಬಾಧ್ಯನಾಗುವನು. ನಾನು ಅವನಿಗೆ ದೇವರಾಗಿರುವೆನು ಅವನುನನಗೆ ಮಗನಾಗಿರುವನು.'' (ಪ್ರಕ.21:7).

10. ''ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾಗಲೂ ಜಯೋತ್ಸವದೊಡನೆ ಮೆರಸುತ್ತಾ ಆತನ ವಿಷಯವಾದ ಜ್ಞಾನವೆಂಬ ಸುವಾಸನೆಯನ್ನುನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪನ ಗೊಳಿಸುತ್ತಾ ಬರುವ ದೇವರಿಗೆ ಸ್ತೋತ್ರ.'' (2 ಕೊರಿ.2:14).

## 32. ಐಕ್ಯವಾಗಿರುವಾತನು!

1. "ಇಬ್ಬರು ಮೂವರು ನನ್ನ ಹೆಸರಿನಲ್ಲಿ ಎಲ್ಲಿ ಕೂಡಿ ಬರುತ್ತಾರೊ ಅಲ್ಲಿ ಅವರ ನಡುವೆ ನಾನು ಇದ್ದೇನೆ ಅಂದನು." (ಮತ್ತಾ.18:20).

2. "ದೇವರು ನಂಬಿಗಸ್ತನು; ನಮ್ಮ ಕರ್ತನಾದ ಯೇಸುಕ್ರಿಸ್ತನೆಂಬ ತನ್ನ ಮಗನ ಅನ್ಯೋನ್ಯತೆಗೆ ನಿಮ್ಮನ್ನು ಕರೆದವನು ಆತನೇ." (1 ಕೊರಿ.1:9).

3. "ನಾವು ಕಂಡು ಕೇಳಿದ್ದು ನಿಮಗೂ ಗೊತ್ತಾಗಿ ನಮಗಿರುವ ಅನ್ಯೋನ್ಯತೆಯಲ್ಲಿ ನೀವೂ ಸೇರಬೇಕೆಂದು ಅದನ್ನು ನಿಮಗೆ ಪ್ರಸಿದ್ಧಿಪಡಿಸುತ್ತೇವೆ. ನಮಗಿರುವ ಅನ್ಯೋನ್ಯತೆಯು ತಂದೆಯ ಸಂಗಡಲೂ ಆತನ ಮಗನಾದ ಯೇಸುಕ್ರಿಸ್ತನ ಸಂಗಡಲೂ ಇರುವಂಥದ್ದು" (1 ಯೋಹಾ.1:3).

4. "ಯೆಹೂದ್ಯರಾಗಲಿ ಗ್ರೀಕರಾಗಲಿ ದಾಸರಾಗಲಿ ಸ್ವತಂತ್ರರಾಗಲಿ ನಾವೆಲ್ಲರೂ ಒಂದೇ ದೇಹವಾಗುವದಕ್ಕಾಗಿ ಒಂದೇ ಆತ್ಮದಲ್ಲಿ ದೀಕ್ಷಾಸ್ನಾನ ಮಾಡಿಸಿಕೊಂಡೆವು." (1 ಕೊರಿ 12:13).

5. " ನಾನು ಅವರಲ್ಲಿ ವಾಸಿಸುತ್ತಾ ತಿರುಗಾಡುವೆನು. ನಾನು ಅವರಿಗೆ ದೇವರಾಗಿರುವೆನು, ಆವರು ನನಗೆ ಪ್ರಜೆಯಾಗಿರುವರು" (2 ಕೊರಿ.6:16).

6. "ಆತನು ಬೆಳಕಿನಲ್ಲಿರುವಂತೆಯೇ ನಾವು ಬೆಳಕಿನಲ್ಲಿ ನಡೆದರೆ ನಾವು ಒಬ್ಬರ ಸಂಗಡಲೊಬ್ಬರು ಅನ್ಯೋನ್ಯತೆಯಲ್ಲಿದ್ದೇವೆ." (1 ಯೋಹಾ.1;7).

7. "ನಾವು ದೇವರ ಸಂಗಡ ಅನ್ಯೋನ್ಯತೆಯುಳ್ಳವರಾಗಿದ್ದೇವೆಂದು ಹೇಳಿ ಕತ್ತಲೆಯಲ್ಲಿ ನಡೆದರೆ ಸುಳ್ಳಾಡುವವರಾಗಿದ್ದೇವೆ." (1 ಯೊಹಾ.1:6).

8. "ಕ್ರಿಸ್ತನಿಂದ ಉತ್ತೇಜನ ಪ್ರೀತಿಯ ಪ್ರೇರಣೆ ಪವಿತ್ರಾತ್ಮನ ಅನ್ಯೋನ್ಯತೆ, ಕಾರುಣ್ಯ ದಯಾರಸಗಳು ಉಂಟಾಗುವದಾದರೆ ಐಕ್ಯಮತ್ಯ ಉಳ್ಳವರಾಗಿದ್ದು ನನ್ನ ಸಂತೋಷವನ್ನು ಪರಿಪೂರ್ಣ ಮಾಡಿರಿ." (ಫಿಲಿ.2:1).

9. "ನಮ್ಮ ಕರ್ತನಾದ ಯೇಸುಕ್ರಿಸ್ತನ ಕೃಪೆಯೂ ದೇವರ ಪ್ರೀತಿಯೂ ಪವಿತ್ರಾತ್ಮನ ಅನ್ಯೋನ್ಯತೆಯು ನಿಮ್ಮೆಲ್ಲರ ಸಂಗಡವಿರಲಿ." (2 ಕೊರಿ.13:14).

10. "ನಿಮ್ಮೆಲ್ಲರಲ್ಲಿ ಒಂದೇ ಪ್ರೀತಿ ಇರಲಿ; ಅನ್ಯೋನ್ಯಭಾವವುಳ್ಳವರು ಒಂದೇ ಗುರಿಯಿಟ್ಟುಕೊಂಡವರು ಆಗಿರ್ರಿ." (ಫಿಲಿ.2:2).

## 33. ಕೊರತೆ ಇಲ್ಲ!

1. "ಯೆಹೋವನು ನನಗೆ ಕುರುಬನು; ಕೊರತೆ ಪಡೆನು." (ಕೀರ್ತ.23:1).

2. ‘‘ಈ ನಾಲ್ವತ್ತುವರುಷ ನಿಮ್ಮ ದೇವರಾದ ಯೆಹೋವನು ನಿಮ್ಮ ಸಂಗಡ ಇದ್ದದರಿಂದ ನಿಮಗೆ ಏನು ಕಡಿಮೆಯಾಗಲಿಲ್ಲ.’’ (ಧರ್ಮೋ.2:7).

3. ‘‘ನನ್ನ ದೇವರು ಕ್ರಿಸ್ತಯೇಸುವಿನ ಮೂಲಕ... ನಿಮ ಪ್ರತಿಯೊಂದು ಕೊರತೆಯನ್ನು ನೀಗಿಸುವನು.’’ (ಫಿಲಿ.4:19).

4. ‘‘ನಿಮ್ಮಲ್ಲಿ ಯಾವನಿಗಾದರು ಜ್ಞಾನವು ಕಡಿಮೆಯಾಗಿದ್ದ ಅವನು ದೇವರನ್ನು ಕೇಳಿಕೊಳ್ಳಲಿ; ಅದು ಅವನಿಗೆ ದೊರಕುವದು.’’ (ಯಾಕೋ.1:5).

5. ‘‘ಪ್ರಾಯದ ಸಿಂಹಗಳಾದರೋ ಹೊಟ್ಟೆಗಿಲ್ಲದೆ ಹಸಿದಾವು; ಕರ್ತನ ಸನ್ನಿದಿಯಲ್ಲಿ ಬೇಡಿಕೊಳ್ಳುವವರಿಗೆ ಯಾವ ಮೇಲಿಗೂ ಕಡಿಮೆ ಇಲ್ಲ.’’ (ಕೀರ್ತ.34:10).

6. ‘‘ನಿನ್ನ ಹಟ್ಟಿಯನ್ನು ನೀನು ಪರೀಕ್ಷಿಸುವಾಗ ಏನೂ ಕಡಿಮೆಯಾಗಿರುವದಿಲ್ಲ.’’ (ಯೋಬ.5:24).

7. ‘‘ನಿಮ್ಮನ್ನು ನಾನು ಹಮ್ಮಿಣಿ ಹಸಿಬೆ ಜೋಡುಗಳಿಲ್ಲದೆ ಕಳುಹಿಸಿದಾಗ ನಿಮಗೆ ಏನಾದರೂ ಕೊರತೆಯಾಯಿತೋ ಎಂದು ಕೇಳಲು ಅವರು ಏನು ಇಲ್ಲವೆಂದರು.’’ (ಲೂಕ.22:35).

8. ‘‘ಬಹಳ ದಯವು ಅವರೆಲ್ಲರ ಮೇಲೆ ಇತ್ತು. ಅವರಲ್ಲಿ ಕೊರತೆಪಡುವವನು ಒಬ್ಬನೂ ಇರಲಿಲ್ಲ.’’ (ಅಪೊ.4;33).

9. ‘‘ನಿಮ್ಮ ಮುಖವನ್ನು ನೋಡುವದಕ್ಕೂ ನಿಮ್ಮ ನಂಬಿಕೆಯ ಕೊರತೆಗಳನ್ನು ನೀಗುವದಕ್ಕೂ ನಮಗೆ ಅನುಕೂಲವಾಗಬೇಕೆಂದು

ನಾವು ಹಗಲಿರುಳು ದೇವರನ್ನು ಅತ್ಯಂತವಾಗಿ ಬೇಡುವವರಾಗಿದ್ದೇವೆ.'' (1 ಥೆಸ.3:10).

10.''ಆ ತಾಳ್ಮೆಯು ಸಿದ್ಧಿಗೆ ಬರಲಿ. ಆಗ ನೀವು ಶಿಕ್ಷಿತರೂ ಸರ್ವಸುಗುಣವುಳ್ಳವರೂ ಏನೂ ಕಡಿಮೆಯಿಲ್ಲದವರೂ ಆಗಿರುವಿರಿ.'' (ಯಾಕೋ.1:4).

## 34. ದೇವ ಸನ್ನಿಧಿ

1. ''ನಾನೇ ನಿಮ್ಮ ಜೊತೆಯಲ್ಲಿ ಬಂದು ನಿಮಗೆ ವಿಶ್ರಾಂತಿಯನ್ನು ಉಂಟುಮಾಡುವೆನು.'' (ವಿಮೋ.33:14).

2. ''ನಿನ್ನ ಬಲದಿಂದ ದಂಡಿನ ಮೇಲೆ ಬೀಳುವೆನು; ನನ್ನ ದೇವರ ಸಹಾಯದಿಂದ ಪ್ರಾಕಾರವನು ಹಾರುವೆನು.'' (ಕೀರ್ತ.18:29).

3. ''ಸ್ವಾಮೀ, ದಯವಿರಲಿ; ನನ್ನೊಂದಿಗೆ ಮಾತಾಡುತ್ತಿರುವ ತಾವು ಸ್ವಾಮಿಯವರೇ ಆಗಿದ್ದೀರೆಂಬದಕ್ಕೆ ನನಗೊಂದು ಗುರುತನ್ನು ಅನುಗ್ರಹಿಸಬೇಕು.'' (ನ್ಯಾಯ.6:17).

4. ''ಯೆಹೋವನ ಸನ್ನಿಧಿಯಲ್ಲಿಯಷ್ಟೆ; ನಿನ್ನ ತಂದೆಯನ್ನೂ ಅವನ ಮನೆಯವರೆಲ್ಲರನ್ನೂ ಬಿಟ್ಟು ನನ್ನನ್ನೇ ಆರಿಸಿಕೊಂಡ ತನ್ನ ಪ್ರಜೆಗಳಾದ ಇಸ್ರಾಯೇಲ್ಯರ ಅರಸನನ್ನಾಗಿ ಮಾಡಿದ ಯೆಹೋವನ ಮುಂದೆ ಇನ್ನೂ ಕುಣಿದಾಡುವೆನು.'' (2 ಸಮು.6:21).

5. ''ನಿನ್ನ ಸಮ್ಮುಖದಲ್ಲಿ ಪರಿಪೂರ್ಣಸಂತೋಷವಿದೆ. ನಿನ್ನ ಬಲಗೈಯಲ್ಲಿ ಶಾಶ್ವತಭಾಗ್ಯವಿದೆ.'' (ಕೀರ್ತ.16:11).

6. "ನೀನು ನನಗೆ ಮಾಡಿದ ಪ್ರಾರ್ಥನೆಯನ್ನೂ ವಿಜ್ಞಾಪನೆಯನ್ನು ಹೇಳಿದ್ದೇನೆ. ನನ್ನ ನಾಮ ಮಹತ್ತು ನೀನು ಕಟ್ಟಿಸಿದ ಆಲಯದಲ್ಲಿ ಸದಾ ಇರುವಂತೆ ಅದನ್ನು ನನಗೋಸ್ಕರ ಪ್ರತಿಷ್ಠಿಸಿಕೊಂಡಿದ್ದೇನೆ." (1 ಅರಸು.9:3).

7. "ಆತನ ಸಾನಿಧ್ಯದಲ್ಲಿ ಮಾನಮಹಿಮೆಗಳೂ ಆತನ ಪವಿತ್ರಾಲಯದಲ್ಲಿ ಬಲ ಸಂತೋಷಗಳೂ ಇರುತ್ತವೆ." (1 ಪೂರ್ವ.16:27).

8. "ಇವು ಸರ್ವಭೂಲೋಕದೊಡೆಯನ ಸನ್ನಿಧಿ ಸೇವಕರು ಎಣ್ಣೆಯ ಬುಗ್ಗೆಗಳೂ ಆದ ಇಬ್ಬರು ಪುರುಷರು ಎಂದು ಹೇಳಿದನು." (ಜೆಕ.4:14).

9. "ನನ್ನ ಸಾನಿಧ್ಯಕ್ಕೆ ಬಾ ಎಂಬ ನಿನ್ನ ಮಾತಿಗೆ ನಾನು - ಯೆಹೋವನೇ, ನಿನ್ನ ಸಾನಿದ್ಯಕ್ಕೆ ಬರಲೇ ಬರುವೆನು ಎಂದು ಉತ್ತರ ಕೊಟ್ಟೆನು." (ಕೀರ್ತ.27:8).

10. "ನಿರ್ದೋಷಿಯಾದ ನನ್ನನ್ನಾದರೋ ನೀನು ಉದ್ಧಾರಮಾಡಿ ನಿನ್ನ ಸನ್ನಿಧಿಯಲ್ಲಿ ಶಾಶ್ವತವಾಗಿ ನಿಲ್ಲಿಸುವಿ." (ಕೀರ್ತ.41:12).

## 35. ಸೌಭಾಗ್ಯವನ್ನು ಕೊಡುವಾತನು

1. "ಚೀಯೋನಿನಲ್ಲಿರುವ ಯೆಹೋವನು ನಿನ್ನನ್ನು ಆಶೀರ್ವದಿಸಲಿ, ಜೀವಮಾನವೆಲ್ಲಾ ಯೆರೂಸಲೇಮಿನ ಸೌಭಾಗ್ಯವನ್ನು ನೋಡುವವನಾಗು" (ಕೀರ್ತ.128:5).

2. ''ಬಡವನಾಗಿರಲು ಬಲ್ಲೆನು; ಸಮೃದ್ಧಿಯುಳ್ಳವನಾಗಿರಲೂ ಬಲ್ಲೆನು'' (ಫಿಲಿ.4:12).

3. ''ನೀನು ಯಾವಾತನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳ ಬಂದಿಯೋ ಆ ಇಸ್ರಾಯೇಲ್ ದೇವರಾದ ಯೆಹೋವನು ನಿನಗೆ ಉತ್ತಮವಾದ ಪ್ರತಿಫಲವನ್ನು ಅನುಗ್ರಹಿಸಲಿ'' (ರೂತಳು 2:12).

4. ''ದಯಾಳುವಾಗಿ ಧನಸಹಾಯಮಾಡುವವನೂ ತನ್ನ ಕಾರ್ಯಗಳನ್ನು ನೀತಿಯಿಂದ ನಡಿಸುವವನೂ ಭಾಗ್ಯವಂತನು'' (ಕೀರ್ತ.112:5).

5. ''ನೀತಿವಂತನ ವಂಶವು ಶುಭ ಹೊಂದುವುದು. ಅವನ ಮನೆಯಲ್ಲಿ ಧನೈಶ್ವರ್ಯಗಳಿರುವದು.'' (ಕೀರ್ತ.112:2.3).

6. ''ದೇವರ ಮುಂದೆ ಹೆದರಿ ಆತನಲ್ಲಿ ಭಯಭಕ್ತಿಯುಳ್ಳವರಿಗೆ ಮೇಲೇ ಆಗುವದೆಂದು ಬಲ್ಲೆನು'' (ಪ್ರಸ.8:12).

7. ''ನಿನ್ನ ಪ್ರಿಯ ಪತ್ನಿಯೊಡನೆ ಸುಖದಿಂದ ಬದುಕು. ನಿನ್ನ ಬಾಳಿನಲ್ಲಿಯೂ ನೀನು ಲೋಕದೊಳಗೆ ಪಡುವ ಪ್ರಯಾಸದಲ್ಲಿಯೂ ಇದೇ ನಿನಗೆ ಬಂದ ಪಾಲು.'' (ಪ್ರಸಂಗಿ 9:9).

8. ''ಪತಿಯ ಹೃದಯವು ಆಕೆಯಲ್ಲಿ ಭರವಸಪಡುವುದು. ಅವನು ಕೊಳ್ಳೆ ಕೊಳ್ಳೆಯಾಗಿ ಸಂಪಾದಿಸುವನು.'' (ಜ್ಞಾನೋ.31:11).

9. ''ನಿನ್ನ ಕಷ್ಟಾರ್ಜಿತವನ್ನು ನೀನೇ ಅನುಭವಿಸುವಿ; ನೀನು ಧನ್ಯನು ನಿನಗೆ ಶುಭವಿರುವುದು'' (ಕೀರ್ತ.128:2).

10. "ನಿಶ್ಚಯವಾಗಿ ನನ್ನ ಜೀವಮಾನದಲ್ಲೆಲ್ಲಾ ಶುಭವೂ ಕೃಪೆಯೂ ನನ್ನನ್ನು ಹಿಂಬಾಲಿಸುವವು". (ಕೀರ್ತ.23:6).

## 36. ನಿತ್ಯ ಒಡಂಬಡಿಕೆ

1. "ನಿನಗೂ ನಿನ್ನ ಸಂತತಿಗೂ ದೇವರಾಗಿರುವೆನೆಂದು ನಾನು ನಿನಗೋಸ್ಕರ ನಿನ್ನ ಸಂತತಿಯ ಎಲ್ಲಾ ತಲಾಂತರಗಳಿಗೋಸ್ಕರವೂ ಮಾಡಿಕೊಂಡ ನನ್ನ ಒಡಂಬಡಿಕೆಯನ್ನು ಸ್ಥಿರಪಡಿಸುವೆನು." (ಆದಿ.17:7).

2. "ಆ ಬಿಲ್ಲು ಮೇಘಗಳಲ್ಲಿ ಕಾಣಿಸುವಾಗ ನಾನು ಅದನ್ನು ನೋಡಿ ದೇವರಾದ ನನಗೂ ಭೂಮಿಯ ಮೇಲಿರುವ ಎಲ್ಲಾ ಜೀವಜಂತು ಗಳಿಗೂ ಆದ ಶಾಶ್ವತವಾದ ಒಡಂಬಡಿಕೆಯನ್ನು ಜ್ಞಾಪಕ ಮಾಡಿಕೊಳ್ಳುವೆನು ಅಂದನು." (ಆದಿ.9:10).

3. "ನಿನ್ನ ಪತ್ನಿಯಾದ ಸಾರಳಲ್ಲಿಯೇ ನಿನ್ನಿಂದ ಮಗಳು ಹುಟ್ಟುವನು. ಅವನಿಗೆ ಇಸಾಕನೆಂದು ಹೆಸರಿಡಬೇಕು. ಅವನ ಸಂಗಡ ನನ್ನ ಒಡಂಬಡಿಕೆಯನ್ನು ಸ್ಥಾಪಿಸಿಕೊಳ್ಳುವೆನು."(ಆದಿ.17:19).

4. "ಯೆಹೋವನು ತನ್ನ ಜನರಿಗೆ ವಿಮೋಚನೆಯನ್ನುಂಟು ಮಾಡಿದ್ದಾನೆ. ತನ್ನ ಒಡಂಬಡಿಕೆಯನ್ನು ನಿತ್ಯಕ್ಕೂ ಸ್ಥಾಪಿಸಿದ್ದಾನೆ." (ಕೀರ್ತ.111:9).

5. "ಆತನು ನನ್ನೊಡನೆ ಒಡಂಬಡಿಕೆ ಮಾಡಿಕೊಂಡಿದ್ದಾನೆ, ಅದು ಎಂದಿಗೂ ಬಿದ್ದು ಹೋಗುವದಿಲ್ಲ." (2 ಸಮು.23:5).

6. "ದಾವೀದನಿಗೆ ಖಂಡಿತವಾಗಿ ವಾಗ್ದಾನ ಮಾಡಿದ ಕೃಪಾ ವರಗಳನ್ನು ನಿಮಗೆ ಕೊಡುತ್ತೇನೆಂಬ ಶಾಶ್ವತವಾದ ಒಡಂಬಡಿಕೆಯನ್ನು ನಿನ್ನೊಂದಿಗೆ ಮಾಡಿಕೊಳ್ಳುವೆನು."(ಯೆಶಾ.55:3).

7. "ನಾನು ನಿಮಗೆ ಹಿತ ಮಾಡುವದನ್ನು ಬಿಟ್ಟು ವಿಮುಖ ನಾಗೆನು ಎಂಬುವ ಶಾಶ್ವತವಾದ ಒಡಂಬಡಿಕೆಯನ್ನು ಅವರೊಂದಿಗೆ ಮಾಡಿಕೊಳ್ಳುವೆನು." (ಯೆರೆ.32:40).

8. "ಆ ದಿನಗಳು ಬಂದ ಮೇಲೆ ಇಸ್ರಾಯೇಲ್ ವಂಶ ದವರೊಂದಿಗೆ ಮಾಕೊಳ್ಳುವ ಒಡಂಬಡಿಕೆಯು ಹೀಗಿರುವದು. ನನ್ನ ಆಜ್ಞೆಗಳನ್ನು ಅವರ ಮನಸ್ಸಿನಲ್ಲಿಡುವೆನು. ಅವರ ಹೃದಯದ ಮೇಲೆ ಅವುಗಳನ್ನು ಬರೆಯುವೆನು." (ಇಬ್ರಿ.8:10).

9. "ಈ ಪಾತ್ರೆಯು ನನ್ನ ರಕ್ತದಿಂದ ಸ್ಥಾಪಿತವಾಗುವ ಹೊಸ ಒಡಂಬಡಿಕೆಯನ್ನು ಸೂಚಿಸುತ್ತದೆ. ನೀವು ಇದರಲ್ಲಿ ಪಾನಮಾಡು ವಾಗೆಲ್ಲಾ ನನ್ನನ್ನು ನೆನಸಿಕೊಳ್ಳುವದಕ್ಕೋಸ್ಕರ ಪಾನ ಮಾಡಿರಿ ಅಂದನು." (1 ಕೊರಿ.11:25).

10."ಇವರ ನಷ್ಟಕ್ಕೆ ಪ್ರತಿಫಲವನ್ನು ಕೊಟ್ಟು ಇವರೊಂದಿಗೆ ನಿತ್ಯ ವಾದ ಒಡಂಬಡಿಕೆಯನ್ನು ಮಾಡಿಕೊಳ್ಳುವೆನು." (ಯೆಶಾ.61:8).

## 37. ಕಾಪಾಡುವಾತನು

1. "ಕರ್ತನು ನಂಬಿಗಸ್ತನು. ಆತನು ನಿಮ್ಮನ್ನು ದೃಢಪಡಿಸಿ ನೀವು ಕೆಡುಕನ ಕೈಗೆ ಸಿಕ್ಕದಂತೆ ಕಾಪಾಡುವನು."(2 ಥೆಸ.3:3).

2. "ಆತನು ನಿನ್ನ ಪಾದಗಳನ್ನು ಕದಲಗೊಡಿಸದಿರಲಿ; ನಿನ್ನನ್ನು ಕಾಯುವವನು ತೂಕಡಿಸದಿರಲಿ."(ಕೀರ್ತ.121:3).

3. "ಎಲ್ಲಾ ಗ್ರಹಿಕೆಯನ್ನು ಮೀರುವ ದೇವ ಶಾಂತಿಯು ನಿಮ್ಮ ಹೃದಯಗಳನ್ನೂ ಯೋಚನೆಗಳನ್ನೂ ಕ್ರಿಸ್ತಯೇಸುವಿನಲ್ಲಿ ಕಾಯುವದು."(ಫಿಲಿ.4:7).

4. "ಪವಿತ್ರನಾದ ತಂದೆಯೇ ನಾವು ಒಂದಾಗಿರುವ ಹಾಗೆ ಇವರೂ ಒಂದಾಗಿರಬೇಕೆಂದು ನೀನು ನನಗೆ ಕೊಟ್ಟ ನಿನ್ನ ಹೆಸರಿನಲ್ಲಿ ಇವರನ್ನು ಕಾಯಬೇಕು."(ಯೋಹಾ.17:11).

5. "ನಾನು ನಂಬಿರುವಾತನನ್ನು ಬಲ್ಲೆನು. ಆತನು ನನ್ನ ವಶದಲ್ಲಿಟ್ಟಿರುವದನ್ನು ಆತನು ಆ ದಿನಕ್ಕಾಗಿ ಕಾಪಾಡುವದಕ್ಕೆ ಶಕ್ತನಾಗಿದ್ದಾನೆಂದು ದೃಢವಾಗಿ ನಂಬಿದ್ದೇನೆ." (2ತಿಮೊ.1:12).

6. "ನಿಮ್ಮೆದುರಿನಲ್ಲಿ ಮಹತ್ಕಾರ್ಯಗಳನ್ನು ನಡಿಸಿ ನಮ್ಮ ಎಲ್ಲಾ ಪ್ರಯಾಣಗಳಲ್ಲಿಯೂ ದಾಟಿ ಬಂದ ಅನ್ಯ ಜನಾಂಗಗಳ ಮಧ್ಯದಲ್ಲಿಯೂ ನಮ್ಮನ್ನು ಕಾಪಾಡಿದನು." (ಯೆಹೋ.24:17).

7. "ನೀನು ನನ್ನ ಸಹನ ವಾಕ್ಯಗಳನ್ನು ಕಾಪಾಡಿದ್ದರಿಂದ ಭೂನಿವಾಸಿಗಳನ್ನುಪರೀಕ್ಷಿಸುವದಕ್ಕಾಗಿ ಲೋಕದ ಮೇಲೆಲ್ಲಾ ಬರುವದಕ್ಕಿರುವ ಶೋಧನೆಯ ಸಮಯದಲ್ಲಿ ನಿನ್ನನ್ನು ತಪ್ಪಿಸಿ ಕಾಪಾಡುವೆನು."(ಪ್ರಕ.3:10).

8. "ನಾನು ಯಾವ ದುಷ್ಕೃತ್ಯವನ್ನೂ ಮಾಡದಂತೆ ಕರ್ತನು ನನ್ನನ್ನು ಕಾಪಾಡಿ ತನ್ನ ಬಳಿಗೆ ಪರಲೋಕ ರಾಜ್ಯಕ್ಕೆ ಸೇರಿಸುವನು." (2 ತಿಮೊ.4:18).

9. "ಇಹಲೋಕದಲ್ಲಿ ತನ್ನ ಪ್ರಾಣವನ್ನು ಹಗೆ ಮಾಡುವವನು ನಿತ್ಯಜೀವಕ್ಕಾಗಿ ಅದನ್ನು ಕಾಪಾಡಿಕೊಳ್ಳುವನು." (ಯೋಹಾ.12:25).

10."ಇಗೋ ಕಳ್ಳನು ಬರುವಂತೆ ಬರುತ್ತೇನೆ. ತಾನು ನಿರ್ವಾಣನಾಗಿ ತಿರುಗಾಡಿ ಅವಮಾನಕ್ಕೆ ಗುರಿಯಾದೆನೆಂದು ಎಚ್ಚರವಾಗಿದ್ದು ತನ್ನ ವಸ್ತ್ರಗಳನ್ನು ಕಾಪಾಡಿಕೊಳ್ಳುವವನು ಧನ್ಯನು."(ಪ್ರಕ.16:15).

## 38. ಯಥಾರ್ಥವಂತರಿಗೆ!

1. "ಯೆಹೋವನು ಭೂಲೋಕದ ಎಲ್ಲಾ ಕಡೆಗಳಲ್ಲಿಯು ದೃಷ್ಟಿಯನ್ನು ಪ್ರಸರಿಸುತ್ತಾ ತನ್ನ ಕಡೆಗೆ ಯಥಾರ್ಥ ಮನಸ್ಸುಳ್ಳವರ ರಕ್ಷಣೆಗಾಗಿ ತನ್ನ ಪ್ರತಾಪವನ್ನು ತೋರ್ಪಡಿಸುತ್ತಾನೆ." (2ಪೂರ್ವ.16:9).

2. "ಧೈರ್ಯದಿಂದ ಕೆಲಸ ಮಾಡಿರಿ. ಯೆಹೋವನು ಸಜ್ಜನರ ಸಹಾಯಕನು." (2 ಪೂರ್ವ.19:11).

3. "ಯೆಹೋವನು ಸದ್ಭಕ್ತರ ಜೀವಮಾನವನ್ನು ಲಕ್ಷಿಸುತ್ತಾನೆ." (ಕೀರ್ತ.37:18).

4. ''ಇಗೋ ದೇವರು ನಿರ್ದೋಷಿಯನ್ನು ತಳ್ಳಿಬಿಡುವದಿಲ್ಲ.'' (ಯೋಬ 8:20).

5. ''ಒಳ್ಳೆ ನಡತೆಯುಳ್ಳವನನ್ನು ನೋಡು, ಯಥಾರ್ಥನನ್ನು ಲಕ್ಷಿಸು.'' (ಕೀರ್ತ.37:37).

6. ''ಯಥಾರ್ಥವಂತರು ದೇಶದಲ್ಲಿ ಸ್ವತಂತ್ರರಾಗಿರುವರು. ನಿರ್ದೋಷಿಗಳು ಅದರಲ್ಲಿ ನೆಲೆಯಾಗಿರುವರು.''(ಜ್ಞಾನೋ.2:21).

7. ''ಆತನು ಯಥಾರ್ಥಚಿತ್ತರಿಗಾಗಿ ಸುಜ್ಞಾನವನ್ನು ಕೂಡಿಸಿಡುವನು.'' (ಜ್ಞಾನೋ.2:7).

8. ''ಧರ್ಮವು ಯಥಾರ್ಥವಂತರನ್ನು ಉದ್ಧರಿಸುವದು.'' (ಜ್ಞಾನೋ.11:6).

9. ''ಯಥಾರ್ಥಚಿತ್ತವೇ ನಿನಗೆ ಸಂತೋಷ; ಸುಜ್ಞಾನದ ರಹಸ್ಯಗಳನ್ನು ನನಗೆ ತಿಳಿಯಪಡಿಸು.''(ಕೀರ್ತ.51:6).

10.''ದಾವೀದನನ್ನು ಕರೆದು ಅವನಿಗೆ - ಯೆಹೋವನಾಣೆ, ನೀನು ಯಥಾರ್ಥನು ಎಂದು ಹೇಳಿದನು.'' (1 ಸಮು.29:6).

## 39. ಆಧೀನಪಡಿಸುವಾತನು!

1. ''ನೀವು ಬಹು ಸಂತಾನವುಳ್ಳವರಾಗಿ ಹೆಚ್ಚಿರಿ, ಭೂಮಿಯಲ್ಲಿ ತುಂಬಿಕೊಂಡು ಅದನ್ನು ವಶಮಾಡಿಕೊಳ್ಳಿರಿ.''(ಆದಿ.1:28).

2. ''ಅವರನ್ನು ಕುಗ್ಗಿಸಿದಂತೆ ಇನ್ನು ಕುಗ್ಗಿಸುವದಿಲ್ಲ, ನಿನ್ನ ಶತ್ರುಗಳೆಲ್ಲರನ್ನು ನಿನಗೆ ಆಧೀನ ಮಾಡುವೆನು.'' (1 ಪೂರ್ವ.17:10).

3. "ಆತನು ಜನಾಂಗಗಳನ್ನು ನಮಗೆ ಆಧೀನಪಡಿಸಿ ಪರಕುಲದವರನ್ನು ನಮ್ಮ ಕಾಲ ಕೆಳಗೆ ಹಾಕಿದ್ದಾನೆ."(ಕೀರ್ತ.47:3).

4. "ಆಗ ಅವನ ರಾಜ್ಯ ಪ್ರಭುತ್ವಗಳು ಸಮಸ್ತ ಭೂಮಂಡಲದಲ್ಲಿನ ರಾಜ್ಯಗಳ ಮಹಿಮೆಯೂ ಪರಾತ್ಪರನ ಭಕ್ತ ಜನರಿಗೆ ಕೊಡೋಣವಾಗಲಿ." (ದಾನಿ.7:27).

5. "ಆತನು ನನ್ನ ಶತ್ರುಗಳಿಗೆ ಪ್ರತಿದಂಡನೆ ಮಾಡುವ ದೇವರು, ಜನಾಂಗ ಗಳನ್ನು ನನಗೆ ಆಧೀನಪಡಿಸುತ್ತಾನೆ."(2 ಸಮು.22:48).

6. "ಎಲ್ಲವನ್ನೂ ಅವನ ಪಾದಗಳ ಕೆಳಗೆ ಹಾಸಿ ಅವನಿಗೆ ಆಧೀನ ಮಾಡಿದ್ದೀಯಲ್ಲವೇ."(ಇಬ್ರಿ.2:8).

7. "ಆತನು ನನ್ನ ಶತ್ರುಗಳಿಗೆ ಪ್ರತಿದಂಡನೆ ಮಾಡುವ ದೇವರು ಜನಾಂಗಗಳನ್ನು ನನಗೆ ಆಧೀನ ಪಡಿಸುತ್ತಾನೆ." (ಕೀರ್ತ.18:47).

8. "ಎಲ್ಲವನ್ನೂ ಅವನ ಪಾದಗಳ ಕೆಳಗೆ ಹಾಕಿ ಅವನಿಗೆ ಆಧೀನ ಮಾಡಿದಿಯಲ್ಲವೇ?"(ಇಬ್ರಿ.2:8).

9. "ಆತನು ಎಲ್ಲವನ್ನೂ ಮನುಷ್ಯನಿಗೆ ಆಧೀನ ಮಾಡಿದನೆಂಬುದರಲ್ಲಿ ಅವನಿಗೆ ಒಂದನ್ನಾದರೂ ಆಧೀನ ಮಾಡದೆ ಬಿಡಲಿಲ್ಲವೆಂದು ಹೇಳಿದ ಹಾಗಾಯಿತು." (ಇಬ್ರಿ.2:8).

10."ದೇವರು ಸಮಸ್ತವನ್ನೂ ಆತನ ಪಾದಗಳ ಕೆಳಗೆ ಹಾಕಿ ಆತನಿಗೆ ಆಧೀನ ಮಾಡಿದ್ದಾನೆಂಬದಾಗಿ ಹೇಳಿಯದೆಯಲ್ಲಾ." (1 ಕೊರಿ.15:27).

## 40. ಸಹೋದರ ಸ್ನೇಹ!

1. "ನಾನು ನಿಮಗೆ ಕೊಟ್ಟ ಆಜ್ಞೆಗಳಿಗೆ ಸರಿಯಾಗಿ ನೀವು ನಡೆದರೆ ನೀವು ನನ್ನ ಸ್ನೇಹಿತರು." (ಯೋಹಾ.15:15).

2. "ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ ಪ್ರೀತಿಗಿಂತ ಹೆಚ್ಚಿನ ಪ್ರೀತಿಯು ಯಾವದೂ ಇಲ್ಲ."(ಯೋಹಾ.15:13).

3. "ಮಿತ್ರನ ಪ್ರೀತಿಯು ನಿರಂತರ, ಸಹೋದರನ ಜನ್ಮವು ಆಪತ್ತಿನಲ್ಲಿ ಸಾರ್ಥಕ." (ಜ್ಞಾನೋ.17:17).

4. "ಸಹೋದರನಿಗಿಂತಲೂ ಹತ್ತಿರ ಹೊಂದಿಕೊಳ್ಳುವ ಮಿತ್ರನುಂಟು." (ಜ್ಞಾನೋ.18:24).

5. "ಯೋಬನು ತನ್ನ ಸ್ನೇಹಿತರಿಗೋಸ್ಕರ ಪ್ರಾರ್ಥಿಸಿದ ಬಳಿಕ ಯೆಹೋವನು ಅವನ ದುಃಸ್ಥಿತಿಯನ್ನು ಹೋಗಲಾಡಿಸಿ ಅವನ ಸೊತ್ತನ್ನು ಮೊದಲಿಗಿಂತ ಎರಡರಷ್ಟಾಗಿ ಹೆಚ್ಚಿಸಿದನು." (ಯೋಬ 42:10)

6. "ಸಹೋದರ ಸ್ನೇಹವು ನೆಲೆಯಾಗಿರಲಿ." (ಇಬ್ರಿ.13:1).

7. "ಸ್ವಾಮೀ, ನಿನ್ನ ಪ್ರಿಯಮಿತ್ರನು ಅಸ್ವಸ್ಥನಾಗಿದ್ದಾನೆ." (ಯೋಹಾ.11:3).

8. "ನಿಮ್ಮ ಆತ್ಮಗಳನ್ನು ಶುದ್ಧ ಮಾಡಿಕೊಂಡಿದ್ದರಿಂದ ನಿಷ್ಕಪಟವಾದ ಸಹೋದರ ಸ್ನೇಹವುಳ್ಳವರಾಗಿರತಕ್ಕದ್ದು." (1 ಪೇತ್ರ 1:22).

9. "ಕ್ರಿಸ್ತನನ್ನು ನಂಬುವವರಾಗಿ ನಮ್ಮನ್ನು ಪ್ರೀತಿಸುವವರಿಗೆ ವಂದನೆ ಹೇಳು." (ತೀತ 3:15).

10. "ಕ್ರೈಸ್ತ ಸಹೋದರರು ಅಣ್ಣತಮ್ಮಂದಿರೆಂದು ಒಬ್ಬರನ್ನೊಬ್ಬರು ಪ್ರೀತಿಸಿರಿ." (ರೋಮಾ.12:10).

## 41. ಹೊತ್ತುಕೊಳ್ಳುವಾತನು !

1. "ಮಗನನ್ನು ತಂದೆ ಹೇಗೋ, ಹಾಗೆಯೇ ನಿಮ್ಮ ದೇವರಾದ ಯೆಹೋವನು ನಿಮ್ಮ ನ್ನು ಹೊತ್ತನಲ್ಲವೇ." (ಧರ್ಮೋ.1:31).

2. "ನಿಮ್ಮ ಮುಪ್ಪಿನ ತನಕ ನಾನೇ ಆಧಾರ, ನರೆ ಬಂದಾಗಲೂ ನಿಮ್ಮ ನ್ನು ಹೊತ್ತು ಸಹಿಸುವೆನು." (ಯೆಶಾ.46:4).

3. "ತನ್ನಲ್ಲಿನ ಮಮತೆಯಿಂದಲೂ ತಾಳ್ಮೆಯಿಂದಲೂ ಅವರನ್ನು ವಿಮೋಚಿಸಿ ಪುರಾತನ ಕಾಲದಲ್ಲೆಲ್ಲಾ ಎತ್ತಿಕೊಂಡು ಹೊರುತ್ತಾ ಬಂದನು."(ಯೆಶಾ.63:9).

4. "ಎಲ್ಲೈ ಕಷ್ಟ ಪಡುವವರೇ, ಹೊರೆ ಹೊತ್ತವರೇ ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ ನಾನು ನಿಮಗೆ ವಿಶ್ರಾಂತಿ ಕೊಡುವೆನು." (ಮತ್ತಾ.11:28).

5. "ಹದ್ದು ತನ್ನ ಮರಿಗಳನ್ನು ರೆಕ್ಕೆಗಳ ಮೇಲೆ ಹೊತ್ತುಕೊಳ್ಳುವಂತೆ ನಾನು ನಿಮ್ಮನ್ನು ಹೊತ್ತುಕೊಂಡು ನನ್ನ ಸ್ಥಳಕ್ಕೆ ಹೇಗೆ ಸೇರಿಸಿದೆನೋ ಇದನ್ನೆಲ್ಲಾ ನೀವು ನೋಡಿದ್ದೀರಷ್ಟೆ." (ವಿಮೋ.19:4).

6. "ಆ ದಿನದಲ್ಲಿ ಅವರು ಹೊರಿಸಿದ ಹೊರೆಯು ನಿಮ್ಮ
ಬೆನ್ನಿನಿಂದಲೂ ಹೂಡಿದ ನೊಗವು ಕತ್ತಿಯಿಂದಲೂ ತೊಲಗುವವು."
(ಯೆಶಾ.10:27).

7. "ನಿಮ್ಮನ್ನು ಗರ್ಭದಿಂದಲೂ ಹೊರುತ್ತಿದ್ದೇನೆ.
ಹುಟ್ಟಿದಂದಿನಿಂದ ವಹಿಸುತ್ತಿದ್ದೇನೆ."(ಯೆಶಾ.46:3).

8. "ನಿನ್ನ ಚಿಂತಾಭಾರವನ್ನು ಯೆಹೋವನ ಮೇಲೆ ಹಾಕು.
ಆತನು ನಿನ್ನನ್ನು ಉದ್ಧಾರ ಮಾಡುವನು." (ಕೀರ್ತ.55:22).

9. "ಒಬ್ಬನು ಮತ್ತೊಬ್ಬನ ಭಾರವನ್ನು ಹೊತ್ತುಕೊಳ್ಳಲಿ, ಹೀಗೆ
ಕ್ರಿಸ್ತನ ನಿಯಮವನ್ನು ನೆರವೇರಿಸಿರಿ."(ಗಲಾ.6:2).

10. "ದೇವರ ಮೇಲಣ ಪ್ರೀತಿ ಏನಂದರೆ ಆತನ ಆಜ್ಞೆಗಳನ್ನು
ಕೈಕೊಂಡು ನಡೆಯುವದೇ, ಆತನ ಆಜ್ಞೆಗಳು ಭಾರವಾದವುಗಳಲ್ಲ."
(1 ಯೋಹಾ.5:3).

## 42. ಸುಗಂಧ!

1. "ನಿನ್ನ ತೈಲವು ಸುಗಂಧ; ನಿನ್ನ ಹೆಸರು ಸುರಿದ ತೈಲದ
ಸುಗಂಧದಂತೆ." (ಪರಮ.1:3).

2. "ನನ್ನ ಜಟಾಮಾಂಸಿಯು ಇತ್ತ ಪರಿಮಳವನ್ನು
ಬೀರುತ್ತಿತ್ತು." (ಪರಮ 1:12).

3. "ನಿನ್ನ ಶ್ವಾಸವು ಸೇಬು ಹಣ್ಣುಗಳೋಪಾದಿಯಲ್ಲಿ
ಪರಿಮಳಿಸಲಿ." (ಪರಮ.7:8).

4. "ಯೆಹೋವನ ಭಯವು ಅವನಿಗೆ ಪರಿಮಳಿಸುವದು." (ಯೆಶಾ.11:3).

5. "ಕ್ರಿಸ್ತನು ನಿಮ್ಮನ್ನು ಪ್ರೀತಿಸಿ ನಮ್ಮೆಲ್ಲರಿಗೋಸ್ಕರ ತನ್ನನ್ನೇ ದೇವರಿಗೆ ಸುಗಂಧ ವಾಸನೆಯಾದ ಕಾಣಿಕೆಯಾಗಿಯೂ ಯಜ್ಞವಾಗಿಯೂ ಸಮರ್ಪಿಸಿಕೊಂಡ ಪ್ರಕಾರ ನೀವು ಪ್ರೀತಿಯಲ್ಲಿ ನಡೆದುಕೊಳ್ಳಿರಿ."(ಎಫೆ.5:2).

6. "ರಕ್ಷಣಾ ಮಾರ್ಗದಲ್ಲಿರುವವರಲ್ಲಿಯೂ ನಾಶನ ಮಾರ್ಗದಲ್ಲಿರುವವರಲ್ಲಿಯೂ ನಾವು ದೇವರ ಮುಂದೆ ಕ್ರಿಸ್ತನ ಪರಿಮಳವಾಗಿದ್ದೇವೆ." (2 ಕೊರಿ.2:15).

7. "ನೀವು ಕೊಟ್ಟು ಕಳುಹಿಸಿದ್ದು ನನಗೆ ತಲುಪಲಾಗಿ ನಾನು ತುಂಬಿ ತುಳುಕಿದವರಾಗಿದ್ದೇನೆ. ಅದು ದೇವರಿಗೆ ಮೆಚ್ಚಿಕೆಯಾದದ್ದೂ, ಸುಗಂಧ ವಾಸನೆಯೇ." (ಫಿಲಿ.4:18).

8. "ಆಗ ಮರಿಯಳು ಬಹು ಬೆಲೆಯುಳ್ಳ ಅಚ್ಚ ಜಟಾಮಾಂಸಿ ತೈಲವನ್ನು ಒಂದು ಸೇರಷ್ಟು ತಂದು ಯೇಸುವಿನ ಪಾದಕ್ಕೆ ಹಚ್ಚಿ ತನ್ನ ತಲೇ ಕೂದಲಿನಿಂದ ಆತನ ಪಾದಗಳನ್ನು ಒರೆಸಿದಳು. ಆ ತೈಲದ ಪರಿಮಳವು ಮನೆಯಲ್ಲೆಲ್ಲಾ ತುಂಬಿಕೊಂಡಿತು." (ಯೋಹಾ.12:3).

9. "ಕಾಮಜನಕ ವೃಕ್ಷಗಳು ಪರಿಮಳ ಬೀರುತ್ತವೆ." (ಪರಮ.7:13)

10. "ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾಗಲೂ ಜಯೋತ್ಸವದೊಡನೆ ಮೆರಸುತ್ತಾ, ಆತನ ವಿಷಯವಾದ ಜ್ಞಾನವೆಂಬ ಸುವಾಸನೆಯುನ್ನು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸುತ್ತಾ ಬರುವ ದೇವರಿಗೆ ಸ್ತೋತ್ರವು." (2 ಕೊರಿ.2:14).

## 43. ಯೆಹೋವನಲ್ಲಿ ಸುರಕ್ಷತೆ!

1. "ಯೆಹೋವನಲ್ಲಿ ಭರವಸವಿಡುವವರು ಚಿಯೋನ್ ಪರ್ವತದ ಹಾಗೆ ಇದ್ದಾರೆ. ಅದು ಕದಲುವದಿಲ್ಲ." (ಕೀರ್ತ.125:1).

2. "ನಾನು ಯೆಹೋವನನ್ನು ಯಾವಾಗಲೂ ನನ್ನೆದುರಿಗೇ ಇಟ್ಟುಕೊಂಡಿದ್ದೇನೆ. ಆತನು ನನ್ನ ಬಲಗಡೆಯಲ್ಲಿ ಇರುವದರಿಂದ ನಾನು ಎಂದಿಗೂ ಕದಲುವದಿಲ್ಲ." (ಕೀರ್ತ.16:8).

3. "ಅರಸನು ಯೆಹೋವನಲ್ಲಿಯೇ ಭರವಸವಿಟ್ಟಿದ್ದಾನೆ. ಪರಾತ್ಪರನ ಕೃಪೆಯ ದೆಸೆಯಿಂದ ಅವನು ಕದಲುವದೇ ಇಲ್ಲ." (ಕೀರ್ತ.21:7).

4. "ನಿನ್ನ ಚಿಂತಾಭಾರವನ್ನು ಯೆಹೋವನ ಮೇಲೆ ಹಾಕು ಆತನು ನಿನ್ನನ್ನು ಉದ್ಧಾರ ಮಾಡುವನು. ನೀತಿವಂತರನ್ನು ಎಂದಿಗೂ ಕದಲಗೊಡಿಸನು." (ಕೀರ್ತ.55:22).

5. "ದೇವರು ಅದರ ಕೊತ್ತಲುಗಳಲ್ಲಿ ತಾನೆ ಭದ್ರವಾದ ಬುರುಜೆಂದು ಕೀರ್ತಿ ಪಡೆದನು."(ಕೀರ್ತ.48:3).

6. "ನನ್ನ ಜನರು ಸಮಾಧಾನ ನಿವಾಸದಲ್ಲಿಯೂ ನಿರ್ಭಯ
ನಿಲಯಗಳಲ್ಲಿಯೂ ನೆಮ್ಮದಿಯ ಆಶ್ರಯಗಳಲ್ಲಿಯೂ
ನೆಲೆಗೊಳ್ಳುವರು." (ಯೆಶಾ.32:18).

7. "ಸ್ಥಿರಚಿತ್ತನನ್ನು ಶಾಂತಿಯಲ್ಲಿ ನೆಲೆಗೊಳಿಸಿ ಕಾಯುವಿ
ಅವನಿಗೆ ನಿನ್ನಲ್ಲಿ ಭರವಸವಿದೆ."(ಯೆಶಾ.26:3).

8. "ನೀನು ನನಗೆ ಬಲವಾದ ಆಶ್ರಯಸ್ಥಾನವಾಗಿರುತ್ತಿ."
(ಕೀರ್ತ.71:7).

9. "ಯೆಹೋವನ ನಾಮವು ಬಲವಾದ ಬುರುಜು, ಶಿಷ್ಟನು
ಅದರೊಳಗೆ ಓಡಿ ಹೋಗಿ ಭದ್ರವಾಗಿರುವನು."
(ಜ್ಞಾನೋ.18:10).

10."ಅಪಾಯ ಕಾಲದಲ್ಲಿ ಆತನು ನನ್ನನ್ನು ಗುಪ್ತ ಸ್ಥಳದಲ್ಲಿ
ಅಡಗಿಸುವನು. ತನ್ನ ಗುಡಾರವೆಂಬ ಆಶ್ರಯ ಸ್ಥಾನದಲ್ಲಿ ನನ್ನನ್ನು
ಭದ್ರಪಡಿಸುವನು." (ಕೀರ್ತ.27:5).

## 44. ಯೆಹೋವನಲ್ಲಿ ಆಸಕ್ತಿ!

1. "ಅವನು ನನ್ನಲ್ಲಿ ಆಸಕ್ತನಾಗಿರುವದರಿಂದ ಅವನನ್ನು
ರಕ್ಷಿಸುವೆನು." (ಕೀರ್ತ.91:14).

2. "ನನ್ನ ದೇವರ ಆಲಯದ ಮೇಲಣ ಅನುರಾಗದಿಂದ
ಅದಕ್ಕೋಸ್ಕರ ನನ್ನ ಸ್ವಂತಸೊತ್ತಿನಿಂದ ಮೂರು ಸಾವಿರ ತಲಾಂತು
ಓಫೀರ್ ದೇಶದ ಬಂಗಾರವನ್ನೂ, ಏಳು ಸಾವಿರ ತಲಾಂತು ಚೊಕ್ಕ
ಬೆಳ್ಳಿಯನ್ನೂ ಕೊಡುತ್ತೇನೆ." (1 ಪೂ.ವೃ.29:3).

3. “ಕಣ್ಣಾರೆ ಕಾಣುವೆನು, ನಾನೇ ನಾನಾಗಿ ನೋಡುವೆನು. ಮತ್ತೊಬ್ಬನಾಗಿ ಅಲ್ಲ, ನನ್ನ ಹೃದಯವು ಹಂಬಲಿಕೆಯಿಂದ ಕುಂದಿದೆ.” (ಯೋಬ.19:27).

4. “ರಾತ್ರಿಯಲ್ಲಿ ನಿನ್ನನ್ನು ಮನಃಪೂರ್ವಕವಾಗಿ ಹಾರೈಸಿದ್ದೇವೆ. ಹೌದು, ನಮ್ಮ ಆತ್ಮದಲ್ಲಿ ನಿನ್ನನ್ನು ತವಕದಿಂದ ಹುಡುಕಿದ್ದೇವೆ' (ಯೆಶಾ.26:9).

5. “ದೇವರೇ, ನೀನೇ ನನ್ನ ದೇವರು, ನಾನು ನಿನ್ನ ದರ್ಶನವನ್ನು ಕುತೂಹಲದಿಂದ ಎದುರು ನೋಡುತ್ತೇನೆ.”(ಕೀರ್ತ.63:1).

6. “ದೇವರೇ, ಬಾಯಾರಿದ ಜಿಂಕೆಯು ನೀರಿನ ತೊರೆಗಳನ್ನು ಹೇಗೋ, ಹಾಗೆಯೇ ನನ್ನ ಮನವು ನಿನ್ನನ್ನು ಬಯಸುತ್ತದೆ.” (ಕೀರ್ತನೆ 42:1).

7. “ನಿನ್ನ ಮಂದಿರದಲ್ಲಿ ನಾನು ನಿನ್ನ ಮಹತ್ತನ್ನು ಪ್ರಭಾವವನ್ನೂ ಕಂಡ ಪ್ರಕಾರ ಈಗಲೂ ಕಾಣಬೇಕೆಂದು ಅಪೇಕ್ಷಿಸುತ್ತೇನೆ.” (ಕೀರ್ತ.63:2).

8. “ನಿನ್ನ ಆಜ್ಞೆಗಳನ್ನು ಲವಲವಿಕೆಯಿಂದ ಆಶಿಸುತ್ತೇನೆ.” (ಕೀರ್ತ.119:131).

9. “ನನ್ನ ಮನಸ್ಸು ನಿನ್ನ ನಿಬಂಧನೆಗಳಲ್ಲಿ ಆಸಕ್ತವಾಗಲಿ; ಆಗ ನನ್ನ ಆಶಾಭಂಗಕ್ಕೆ ಕಾರಣವಿರುವುದಿಲ್ಲ” (ಕೀರ್ತ.119:80).

10.“ಯೆಹೋವನ ಆಲಯದ ಅಂಗಳಗಳಲ್ಲಿ ಸೇರಬೇಕೆಂದು ನನ್ನ ಆತ್ಮವು ಹಂಬಲಿಸುತ್ತಾ ಕುಂದಿಹೋಗಿತ್ತು.” (ಕೀರ್ತ.84:2).

## 45. ಪ್ರಕಟಪಡಿಸುತ್ತಾನೆ!

1. "ಆತನು ಅಗಾಧ ವಿಷಯಗಳನ್ನೂ ಗೂಡಾರ್ಥಗಗಳನ್ನೂ ಬೈಲಿಗೆ ತರುತ್ತಾನೆ." (ದಾನಿ.2:22).

2. "ನಿಮ್ಮಲ್ಲಿ ಪ್ರವಾದಿ ಇದ್ದರೆ ನಾನು ಅವನಿಗೆ ಜ್ಞಾನದೃಷ್ಟಿಯಲ್ಲಿ ಎಣಿಸಿಕೊಳ್ಳುವೆನು. ಇಲ್ಲವೇ ಸ್ವಪ್ನದಲ್ಲಿ ಅವನ ಸಂಗಡ ಮಾತಾಡುವೆನು." (ಅರಣ್ಯ.12:6).

3. "ರಹಸ್ಯವಾದವುಗಳು ನಮ್ಮ ದೇವರಾದ ಯೆಹೋವನವು. ಆದರೆ ಆತನಿಂದ ಪ್ರಕಟವಾದವುಗಳು ಸದಾ ನಮ್ಮ ಮತ್ತು ನಮ್ಮ ಸಂತತಿಯವರವು." (ಧರ್ಮೋ.29:29).

4. "ಆತನು ಅನಾದಿ ಕಾಲದಲ್ಲಿ ಆ ಕೃಪೆಯನ್ನು ಯೇಸುಕ್ರಿಸ್ತನಲ್ಲಿ ನಮಗೆ ಅನುಗ್ರಹಿಸಿ ಈಗ ನಮ್ಮ ರಕ್ಷಕನಾದ ಕ್ರಿಸ್ತಯೇಸುವಿನ ಪ್ರತ್ಯಕ್ಷತೆಯ ಮೂಲಕ ಅದನ್ನು ಪ್ರಕಾಶ ಪಡಿಸಿದ್ದಾನೆ." (2 ತಿಮೊ.1:10).

5. "ತಂದೆಯೇ ಪರಲೋಕ ಭೂಲೋಕಗಳ ಒಡೆಯನೇ,ನೀನು ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು ಮರೆಮಾಡಿ ಬಾಲಕರಿಗೆ ಪ್ರಕಟಮಾಡಿದ್ದೀ ಎಂದು ನಿನ್ನನ್ನು ಕೊಂಡಾಡುತ್ತೇನೆ." (ಮತ್ತಾ.11:25).

6. "ನಾನು ಬಾಯಿತೆರೆದು ಸಾಮ್ಯರೂಪವಾಗಿ ಉಪದೇಶಿಸುವೆನು. ಲೋಕಾದಿಯಿಂದ ಮರೆಯಾದವುಗಳನ್ನು ಹೊರಪಡಿಸುವೆನು." (ಮತ್ತಾ.13:35).

7. "ಕರ್ತನು ಕತ್ತಲೆಯಲ್ಲಿರುವ ಗುಪ್ತ ಕಾರ್ಯಗಳನ್ನು ಬೆಳಕಿಗೆ ತರುವನು. ಹೃದಯದ ಯೋಚನೆಗಳನ್ನು ಪ್ರತ್ಯಕ್ಷ ಪಡಿಸುವನು. ಆ ಕಾಲದಲ್ಲಿ ಪ್ರತಿಯೊಬ್ಬನಿಗೆ ಬರತಕ್ಕ ಹೊಗಳಿಕೆಯು ದೇವರಿಂದಲೇ ಬರುವದು." (1 ಕೊರಿ.4:5).

8. "ನಿಮಗೋಸ್ಕರ ನಿರ್ವಹಿಸುವದಕ್ಕಾಗಿ ದೇವರು ನನಗೆ ಕೃಪೆಯಾಗಿ ಕೊಟ್ಟ ಕೆಲಸವನ್ನೂ ಇದುವರೆಗೆ ಗುಪ್ತವಾಗಿದ್ದ ಒಂದು ಸಂಗತಿ ದೈವಪ್ರಕಟಣೆಯಿಂದ ನನಗೆ ತಿಳಿಸಲ್ಪಟ್ಟಿತೆಂಬದನ್ನೂ ನೀವು ಕೇಳಿದ್ದೀರಲ್ಲಾ."(ಎಫೆ.3:3 ).

9. "ಈ ದಿನದವರೆಗೂ ಹಳೇ ಒಡಂಬಡಿಕೆಯು ಪಾರಾಯಣ ವಾಗುವಾಗ ಅದು ಕ್ರಿಸ್ತನಲ್ಲಿ ಗತಿಸಿ ಹೋಗುತ್ತದೆಂಬದು ಅವರಿಗೆ ಪ್ರಕಟವಾಗದೆ ಇರುವದರಿಂದ ಅದೇ ಮುಸುಕು ಅವರ ಹೃದಯದ ಮೇಲೆ ಇರುತ್ತದೆ. " (2 ಕೊರಿ.3:14).

10."ನಾನು ಸಾರಿದ ಸುವಾರ್ತೆಯಂತೂ ಮನುಷ್ಯ ಕಲ್ಪನೆ ಯಲ್ಲವೆಂದು ನಮಗೆ ತಿಳಿಯಪಡಿಸುತ್ತೇನೆ. ನಾನು ಅದನ್ನು ಮನುಷ್ಯರಿಂದ ಹೊಂದಲಿಲ್ಲ. ನನಗೆ ಯಾರೂ ಉಪದೇಶಿಸಲಿಲ್ಲ. ಯೇಸುಕ್ರಿಸ್ತನೇ ಅದನ್ನು ನನಗೆ ಪ್ರಕಟಿಸಿದನು."(ಗಲಾ.1:11-12).

# 46. ನಿತ್ಯವಾದ ಆಶೀರ್ವಾದಗಳು!

## ಭಾಗ 1

1. "ನಾನು ನಿನ್ನನ್ನು ಅಭಿವೃದ್ಧಿಪಡಿಸಿ ನಿನ್ನ ಸಂತತಿಯನ್ನು ಹೆಚ್ಚಿಸುವೆನು; ಅನೇಕ ಜನಾಂಗಗಳು ನಿನ್ನಿಂದುಂಟಾಗುವಂತೆ ಮಾಡುವೆನು. ನಿನ್ನ ತರುವಾಯ ನಿನ್ನ ಸಂತತಿಗೆ ಈ ದೇಶವನ್ನು ಶಾಶ್ವತ ಸ್ವಾಸ್ಥ್ಯವನ್ನಾಗಿ ಕೊಡುವೆನು." (ಆದಿ.48:4).

2. "ನಿನ್ನ ತಂದೆಯ ಆಶೀರ್ವಾದಗಳು ಆದಿಯಿಂದಿದ್ದ ಪರ್ವತಗಳಿಂದುಂಟಾಗುವ ಮೇಲುಗಳಿಗಿಂತಲೂ... ಉತ್ತಮ ವಸ್ತುಗಳಿಗಿಂತಲೂ ವಿಶೇಷವಾಗಿವೆ." (ಆದಿ.49:26).

3. "ಅವರನ್ನೂ ಅಭಿಷೇಕಿಸಬೇಕು. ಈ ಅಭಿಷೇಕದಿಂದ ಯಾಜಕತ್ವವು ಅವರಿಗೂ ಅವರ ಸಂತತಿಯುವರಿಗೂ ಶಾಶ್ವತವಾಗಿರುವದು ಎಂದನು." (ವಿಮೋ.40:15).

4. "ಆ ಒಡಂಬಡಿಕೆ ಏನೆಂದರೆ ಅವನಿಗೂ ಅವನ ತರುವಾಯ ಅವನ ಸಂತತಿಯುವರಿಗೂ ಯಾಜಕತ್ವವು ಶಾಶ್ವತವಾಗಿಯೇ ಇರುವದೆಂದು ಮಾತು ಕೊಡುತ್ತೇನೆ." (ಅರ.25:13).

5. "ಅವನು ಎಂದೂ ಕದಲುವದಿಲ್ಲ; ನೀತಿವಂತನನ್ನು ಯಾವಾಗಲೂ ನೆನಸುವರು." (ಕೀರ್ತ.112:6).

6. "ನಿನ್ನ ನೀತಿಯು ನಿತ್ಯವಾದದ್ದೇ, ನಿನ್ನ ಧರ್ಮಶಾಸ್ತ್ರವು ಸತ್ಯವಾಗಿದೆ." (ಕೀರ್ತ.119:142).

7. "ಯೆಹೋವನೇ ನಿನ್ನ ಆಶೀರ್ವಾದವು ನಿನ್ನ ಪ್ರಜೆಯ ಮೇಲೆ ಇರಲಿ." (ಕೀರ್ತ.3:8).

8. "ಶುದ್ಧಹಸ್ತವೂ ನಿರ್ಮಲ ಮನಸ್ಸೂ ಉಳ್ಳವನಾಗಿದ್ದಾನೋ ಅವನೇ ಯೆಹೋವನಿಂದ ಶುಭವನ್ನು ಹೊಂದುವನು." (ಕೀರ್ತ.24:4-5)

9. "ಯೆಹೋವನ ಆಶೀರ್ವಾದವು ಯಾರಿಗಿರುವದೋ ಅವರು ದೇಶವನ್ನು ಅನುಭವಿಸುವರು." (ಕೀರ್ತ.37:22).

10. "ನಿನ್ನ ಕೃಪೆಯಿಂದ ಸಂವತ್ಸರಕ್ಕೆ ಸುಭಿಕ್ಷ ಕಿರೀಟವನ್ನು ಇಟ್ಟಿದ್ದೀ. ನೀನು ಹಾದು ಹೋಗುವ ಮಾರ್ಗದಲ್ಲೆಲ್ಲಾ ಸಮೃದ್ಧಿಕರವಾದ ವೃಷ್ಟಿಯು ಸುರಿಯುವದು." (ಕೀರ್ತ.65:11).

## 47. ನಿತ್ಯವಾದ ಆಶೀರ್ವಾದಗಳು!

### ಭಾಗ 2

1. "ಇಸ್ರಾಯೆಲ್ಯರಿಗೋ ಯೆಹೋವನಿಂದ ಶಾಶ್ವತ ರಕ್ಷಣೆ ದೊರೆಯುವದು. ಯುಗಯುಗಾಂತರಕ್ಕೂ ನಾವು ನಾಚಿಕೆಗೀಡಾಗುವದಿಲ್ಲ." (ಯೆಶಾ.45:17).

2. "ನನ್ನ ಪ್ರಾಕಾರಗಳೊಳಗೆ ನನ್ನ ಆಲಯದಲ್ಲಿ ಅವರ ಜ್ಞಾಪಕಾರ್ಥವಾಗಿ ಶಿಲೆಯನ್ನಿಟ್ಟು, ಹೆಣ್ಣು ಗಂಡು ಮಕ್ಕಳಿಗಿಂತ ಮೇಲಾದ ಹೆಸರುವಾಸಿಯನ್ನು ದಯಪಾಲಿಸುವೆನು. ಹೌದು, ಎಂದಿಗೂ ಅಳಿಯದ ಶಾಶ್ವತ ನಾಮವನ್ನು ಅನುಗ್ರಹಿಸುವೆನು." (ಯೆಶಾ.56:5).

3. "ನೀತಿವಂತನ ವಂಶವು ಶುಭ ಹೊಂದುವದು. ಅವನ ಮನೆಯಲ್ಲಿ ಧನೈಶ್ವರ್ಯಗಳಿರುವವು. ಅವನ ನೀತಿಯು ಸದಾಕಾಲವೂ ಫಲಿಸುತ್ತಿರುವದು." (ಕೀರ್ತ.112:2-3).

4. "ಯೆಹೋವನು ನಿಮ್ಮನ್ನೂ ನಿಮ್ಮ ಮಕ್ಕಳನ್ನೂ ಅಭಿವೃದ್ಧಿಪಡಿಸಲಿ. ಯೆಹೋವನಿಂದ ನಿಮಗೆ ಆಶೀರ್ವಾದವಾಗಲಿ." (ಕೀರ್ತ.115:4-5).

5. "ಯೆಹೋವನ ಆಶೀರ್ವಾದವು ಭಾಗ್ಯದಾಯಕವು ಅದು ವ್ಯಸನವನ್ನು ಸೇರಿಸದು." (ಜ್ಞಾನೋ.10:22).

6. "ದಯಾದೃಷ್ಟಿಯುಳ್ಳವನು ಆಶೀರ್ವಾದವನ್ನು ಪಡೆಯುವನು. ತನ್ನ ಅನ್ನವನ್ನು ಬಡವರಿಗೆ ಕೊಡುತ್ತಾನಲ್ಲವೇ." (ಜ್ಞಾನೋ.22:9).

7. "ನಂಬಿಗಸ್ತನು ಆಶೀರ್ವಾದ ಪೂರ್ಣನಾಗುವನು." (ಜ್ಞಾನೋ.28:20).

8. "ನಾನು ಅವರನ್ನೂ ನನ್ನ ಪರ್ವತದ ಸುತ್ತಣ ಪ್ರದೇಶಗಳನ್ನೂ ಆಶೀರ್ವದಿಸಿ ಸುಖಪಡಿಸುವೆನು. ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸುವೆನು."(ಯೆಹೆ.34:26).

9. "ನಮ್ಮ ಕರ್ತನಾದ ಯೇಸುಕ್ರಿಸ್ತನ ದೇವರೂ ತಂದೆಯೂ ಆಗಿರುವಾತನಿಗೆ ಸ್ತೋತ್ರ. ಆತನು ಪರಲೋಕದಲ್ಲಿನ ಸಕಲ ಆತ್ಮೀಕ ವರಗಳನ್ನು ನಮಗೆ ಕ್ರಿಸ್ತಯೇಸುವಿನಲ್ಲಿ ಅನುಗ್ರಹಿಸಿದ್ದಾನೆ." (ಎಫೆ.1:3).

10. " ಇವರ ಸಂತಾನವು ಜನಂಗಗಳಲ್ಲಿ ಪ್ರಖ್ಯಾತವಾಗುವದು. ಇವರ ಸಂತತಿಯು ಅನ್ಯ ದೇಶಿಯರಲ್ಲಿ ಹೆಸರುಗೊಳ್ಳುವದು. ಇವರನ್ನು ನೋಡುವವರೆಲ್ಲರೂ ಯೆಹೋವನು ಆಶೀರ್ವದಿಸಿದ ವಂಶವು ಇದೇ ಎಂದು ಒಪ್ಪಿಕೊಳ್ಳುವರು." (ಯೆಶಾ.61:9).

## 48. ಪ್ರಾರ್ಥನೆಯನ್ನು ಕೇಳುವಾತನು!

1. "ನಾನು ನಿನ್ನ ಪ್ರಾರ್ಥನೆಯನ್ನು ಕೇಳಿದ್ದೇನೆ, ನಿನ್ನ ಕಣ್ಣೀರನ್ನು ನೋಡಿದ್ದೇನೆ, ನೀನು ಗುಣಹೊಂದುವಿ."(2 ಅರ.20:5).

2. "ನೀನು ಪ್ರಾರ್ಥಿಸುವಿ, ಅತನು ಲಾಲಿಸುವನು. ಆತನಿಗೆ ಹರಕೆಗಳನ್ನು ಒಪ್ಪಿಸುವಿ." (ಯೋಬ 22:27).

3. "ಅವನು ದೇವರನ್ನು ಪ್ರಾರ್ಥಿಸಿ ಆತನ ಒಲುಮೆಗೆ ಪಾತ್ರನಾಗಿ ಆತನ ದರ್ಶನ ಮಾಡಿ ಉತ್ಸಾಹಧ್ವನಿಗೈದು ತಿರಿಗಿ ಆತನಿಂದ ನೀತಿವಂತನೆನಿಸಿಕೊಳ್ಳುವನು." (ಯೋಬ.33:26).

4. "ನನ್ನ ಅರಸೇ, ನನ್ನ ದೇವರೇ, ನಿನ್ನನ್ನೇ ಪ್ರಾರ್ಥಿಸುವೆನು. ನನ್ನ ಮೊರೆಯನ್ನು ಆಲೈಸು."(ಕೀರ್ತ.5:2).

5. "ಯೆಹೋವನೇ ನ್ಯಾಯವಾದದ್ದನ್ನು ಆಲೈಸು. ನನ್ನ ಮೊರೆಗೆ ಲಕ್ಷ್ಯವಿಡು. ನನ್ನ ಪ್ರಾರ್ಥನೆಗೆ ಕಿವಿಗೊಡು. ಅದು ಕಪಟವಾದ ಬಾಯಿಂದ ಬಂದದ್ದಲ್ಲ."(ಕೀರ್ತ.17:1).

6. "ಪ್ರಾರ್ಥನೆಯನ್ನು ಕೇಳುವವನೇ, ನರರೆಲ್ಲರೂ ನಿನ್ನ ಬಳಿಗೆ ಬರುವರು."(ಕೀರ್ತ.65:2).

7. "ಯೆಹೋವನೇ ನನ್ನನ್ನು ರಕ್ಷಿಸುವ ದೇವರೇ, ಹಗಲಿರುಳು ನಿನಗೆ ಮೊರೆಯಿಡುತ್ತೇನೆ. ನನ್ನ ಪ್ರಾರ್ಥನೆಯು ನಿನ್ನ ಸನ್ನಿಧಿಯನ್ನು ಮುಟ್ಟಲಿ." (ಕೀರ್ತ.88:1-2).

8. "ಹೊತ್ತಾರೆ ನಿನ್ನ ಕೃಪೆಯು ನನಗೆ ಪ್ರಕಟವಾಗಲಿ. ನಿನ್ನಲ್ಲಿ ಭರವಸವಿಟ್ಟಿದ್ದೇನಲ್ಲಾ."(ಕೀರ್ತ.143:8).

9. "ನನ್ನ ಆತ್ಮವು ನಿನ್ನಲ್ಲಿ ಕುಂದಿದಾಗ ಯೆಹೋವನಾದ ನಿನ್ನನ್ನು ಸ್ಮರಿಸಿದೆನು. ನನ್ನ ಬಿನ್ನಹವು ನಿನಗೆ ಮುಟ್ಟಿತು. ನಿನ್ನ ಪರಿಶುದ್ಧಾಲಯಕ್ಕೆ ಸೇರಿತು." (ಯೋನ 2:7).

10."ಯಾವ ಸಂಬಂಧವಾಗಿಯೂ ಚಿಂತೆ ಮಾಡದೆ ಸರ್ವ ವಿಷಯದಲ್ಲಿ ದೇವರ ಮುಂದೆ ಕೃತಜ್ಞತಾ ಸ್ತುತಿಯನ್ನೂ ಪ್ರಾರ್ಥನೆ ವಿಜ್ಞಾಪನೆಗಳನ್ನೂ ಮಾಡುತ್ತಾ ನಿಮಗೆ ಬೇಕಾದದ್ದನ್ನು ತಿಳಿಯಪಡಿಸಿರಿ." (ಫಿಲಿ.4:6).

## 49. ಬಿತ್ತನೆಯ ಆಶೀರ್ವದಗಳು!

1. "ಭೂಮಿಯು ಇರುವತನಕ ಬಿತ್ತನೆಯೂ ಕೊಯಿಲೂ ಚಳಿಯೂ ಸೆಕೆಯೂ ಬೇಸಿಗೆಕಾಲವೂ ಹಿಮಕಾಲವೂ ಹಗಲೂ ಇರುಳೂ ಇವುಗಳ ಕ್ರಮ ತಪ್ಪುವದೇ ಇಲ್ಲ."(ಆದಿ.8:22).

2. "ಅಳುತ್ತಾ ಬಿತ್ತುವವರು ಹಾಡುತ್ತಾ ಕೊಯ್ಯುವರು. ದುಃಖಿಸುತ್ತಾ ಬೀಜವನ್ನು ತೆಗೆದುಕೊಂಡು ಹೋಗುವವನು ಹರ್ಷಿಸುತ್ತಾ ಸಿವುಡು ಗಳನ್ನು ಹೊತ್ತುಕೊಂಡು ಬರುವನು:" (ಕೀರ್ತ.126:6,7).

3. "ಮುಂಜಾನೆ ಬೀಜ ಬಿತ್ತು. ಸಂಜೆಯತನಕ ಕೈತೆಗೆಯಬೇಡ. ಇದು ಸಫಲವೋ, ಅದು ಸಫಲವೋ, ಒಂದು ವೇಳೆ ಎರಡು ಚೆನ್ನಾಗುವದೋ ನಿನಗೆ ತಿಳಿಯದು."(ಪ್ರಸ.11:6).

4. "ಆಗ ನೀವು ಹೊಲದಲ್ಲಿ ಬೀಜ ಬಿತ್ತುವದಕ್ಕೆ ಆತನು ಬಿತ್ತನೆಯ ಮಳೆಯನ್ನೂ ದಯಪಾಲಿಸುವನು; ನೆಲದ ಬೆಳೆಯಿಂದ ಸಾರವಾದ ಆಹಾರವನ್ನು ಸಮೃದ್ಧಿಯಾಗಿ ಒದಗಿಸುವನು." (ಯೆಶಾ.30:23).

5. "ಬಿತ್ತುವವನಿಗೆ ಬೀಜವನ್ನು, ಉಣ್ಣುವವನಿಗೆ ಆಹಾರವನ್ನು ಒದಗಿಸದ ಹೊರತು ಹೇಗೆ ಆಕಾಶಕ್ಕೆ (ಮಳೆಯೂ ಹಿಮವೂ) ಸುಮ್ಮನೆ ಹಿಂದಿರುಗುವದಿಲ್ಲವೋ ಹಾಗೆಯೇ ನನ್ನ ಬಾಯಿಂದ ಹೊರಟ ಮಾತು ನನ್ನ ಇಷ್ಟಾರ್ಥವನ್ನು ನೆರವೇರಿಸದ ಹೊರತು ನನ್ನ ಕಡೆಗೆ ವ್ಯರ್ಥವಾಗಿ ಹಿಂದಿರುಗುವದಿಲ್ಲ."(ಯೆಶಾ.55:10)

6. "ನೀತಿವಂತರಿಗೋಸ್ಕರ ಪ್ರಕಾಶವೂ ಯಥಾರ್ಥ ಹೃದಯವುಳ್ಳವರಿಗೆ ಸಂತೋಷವೂ ಬಿತ್ತಲ್ಪಟ್ಟಿದೆ."(ಕೀರ್ತ.97:11).

7. "ಕೊಯ್ಯುವವನಿಗೆ ಈಗಲೇ ಕೂಲಿ ದೊರೆಯುತ್ತದೆ. ಅವನು ನಿತ್ಯ ಜೀವಕ್ಕೆ ಫಲವನ್ನು ಕೂಡಿಸಿಡುತ್ತಾನೆ. ಹೀಗೆ ಬಿತ್ತುವವನಿಗೂ ಕೊಯ್ಯುವವನಿಗೂ ಕೂಡ ಸಂತೋಷವಾಗುತ್ತದೆ." (ಯೋಹಾ.4:36).

8. "ಸ್ವಲ್ಪವಾಗಿ ಬಿತ್ತುವವನು ಪೈರನ್ನು ಸ್ವಲ್ಪವಾಗಿ ಕೊಯ್ಯುವನು. ಹೆಚ್ಚಾಗಿ ಬಿತ್ತುವವನು ಹೆಚ್ಚಾಗಿ ಕೊಯ್ಯುವನು ಎಂದು ತಿಳಿದುಕೊಳ್ಳಿರಿ."(2ಕೊರಿ.9:6).

9. "ಮೋಸ ಹೋಗಬೇಡಿರಿ; ದೇವರು ತಿರಸ್ಕಾರ ಸಹಿಸುವವನಲ್ಲ. ಮನುಷ್ಯನು ತಾನು ಏನು ಬಿತ್ತುತ್ತಾನೋ ಅದನ್ನೇ ಕೊಯ್ಯಬೇಕು." (ಗಲಾ.6:7).

10."ಬಿತ್ತುವವನಿಗೆ ಬೀಜವನ್ನೂ ಉಣ್ಣುವವನಿಗೆ ಆಹಾರವನ್ನೂ ಕೊಡುವಾತನು ನಿಮಗೂ ಬಿತ್ತುವದಕ್ಕೆ ಬೀಜವನ್ನು ಕೊಟ್ಟು, ಹೆಚ್ಚಿಸಿ ನಿಮ್ಮ ಧರ್ಮಕಾರ್ಯಗಳಿಂದಾಗುವ ಫಲಗಳನ್ನು ವೃದ್ಧಿಪಡಿಸುವನು." (2 ಕೊರಿ.9:10).

## 50. ಬೆಳಕಾಗಿರುವಾತನು!

1. "ದೇವರು ಬೆಳಕಾಗಲಿ ಅನ್ನಲು ಬೆಳಕಾಯಿತು." (ಆದಿ;1:3).

2. "ನೀನೇ ನನ್ನ ದೀಪವನ್ನು ಹೊತ್ತಿಸುವವನಲ್ಲವೇ? ನನ್ನ ದೇವರಾದ ಯೆಹೋವನು ನನಗೆ ಬೆಳಕನ್ನು ಕೊಟ್ಟು, ಕತ್ತಲನ್ನು ಪರಿಹರಿಸುವನು."(ಕೀರ್ತ.18:28).

3. "ಯೆಹೋವನು ನನಗೆ ಬೆಳಕೂ ರಕ್ಷಕನು ಆಗಿದ್ದಾನೆ, ನಾನು ಯಾರಿಗೆ ಭಯಪಟ್ಟೇನು?"(ಕೀರ್ತ.27:1).

4. "ಯೆಹೋವನು ಹಗಲು ಹೊತ್ತಿನಲ್ಲಿ ದಾರಿ ತೋರಿಸು ವದದಕ್ಕೆ ಮೇಘಸ್ತಂಭದಲ್ಲಿಯೂ, ರಾತ್ರಿ ವೇಳೆಯಲ್ಲಿ ಬೆಳಕು ಕೊಡುವದಕ್ಕೆ ಅಗ್ನಿ ಸ್ತಂಭದಲ್ಲಿಯೂ ಇದ್ದನು."(ವಿಮೋ.13:21).

5. "ನಿನ್ನ ಬಳಿ ಜೀವದ ಬುಗ್ಗೆ ಉಂಟಲ್ಲಾ; ನಿನ್ನ ತೇಜಸ್ಸು ನಮಗೆ ಬೆಳಕು ಕೊಡುತ್ತದೆ."(ಕೀರ್ತ.36:9).

6. "ಆಜ್ಞೆಯೇ ದೀಪ, ಉಪದೇಶವೇ ಬೆಳಕು." (ಜ್ಞಾನೋ.6:23).

7. "ಆತನ ಮುಖವು ಸೂರ್ಯನ ಹಾಗೆ ಪ್ರಕಾಶಿಸಿತು. ಆತನ ವಸ್ತ್ರಗಳು ಬೆಳಕಿನಂತೆ ಬೆಳ್ಳಗಾದವು."(ಮತ್ತಾ.17:2).1

8. "ಈಗ ನೀವು ಕ್ರಿಸ್ತನಲ್ಲಿದ್ದು ಬೆಳಕಾಗಿದ್ದೀರಿ, ಬೆಳಕಿನವರಂತೆ ನಡೆದುಕೊಳ್ಳಿರಿ."(ಎಫೆ.5:8).

9. "ನಾನು ಲೋಕದಲ್ಲಿರುವಾಗ ಲೋಕಕ್ಕೆ ಬೆಳಕಾಗಿದ್ದೇನೆ." (ಯೋಹಾ.9:5).

10."ಏಳು ಪ್ರಕಾಶಿಸು, ನಿನಗೆ ಬೆಳಕು ಬಂತು, ಯೆಹೋವನ ತೇಜಸ್ಸು ನಿನ್ನ ಮೇಲೆ ಉದಯಿಸಿದೆ."(ಯೆಶಾ.60:1).

## 51. ಸಫಲ ಪಡಿಸುವನು!

1. "ಈ ಧರ್ಮಶಾಸ್ತ್ರವು ಯವಗಲೂ ನಿನ್ನ ಬಾಯಿಯಲ್ಲಿರಲಿ. ಹಗಲಿರುಳು ಅದನ್ನು ಧ್ಯಾನಿಸುತ್ತಾ ಅದರಲ್ಲಿ ಬರೆದಿರುವದನ್ನೆಲ್ಲಾ ಕೈಕೊಂಡು ನಡಿ, ಆಗ ನಿನ್ನ ಮಾರ್ಗದಲ್ಲೆಲ್ಲಾ ಸಫಲನಾಗುವಿ." (ಯೆಹೋ.1:8).

2. "ಅವನು ನೀರಿನ ಕಾಲುವೆಗಳ ಬಳಿಯಲ್ಲಿ ಬೆಳೆದಿರುವ ಮರದ
ಹಾಗಿರುವನು. ಅಂಥ ಮರವು ತಕ್ಕ ಕಾಲದಲ್ಲಿ ಫಲಕೊಡುತ್ತದಲ್ಲಾ
ಆದರಂತೆ ಅವನ ಕಾರ್ಯವೆಲ್ಲವೂ ಸಫಲವಾಗುವದು." (ಕೀರ್ತ.1:3)

3. "ಯೆಹೋವನು ನಿನ್ನ ಕಾರ್ಯವನ್ನು ಸಿದ್ಧಿಗೆ ತರುವನು."
(ಕೀರ್ತ.138:8).

4. "ಮುಂಜಾನೆ ಬೀಜವನ್ನು ಬಿತ್ತು; ಸಂಜೆಯ ತನಕ
ಕೈತೆಗೆಯಬೇಡ. ಇದು ಸಫಲವೋ, ಅದು ಸಫಲವೋ ಒಂದು ವೇಳೆ
ಎರಡು ಚೆನ್ನಾಗುವವೋ ನಿನಗೆ ತಿಳಿಯದು."(ಪ್ರಸ.11:6).

5. "ನಾನೇ ಬಾಯಿ ಬಿಟ್ಟು ಅವನನ್ನು ಕರೆದು ಬರಮಾಡಿದ್ದೇನೆ.
ಅವನ ಮಾರ್ಗವು ಸಾರ್ಥಕವಾಗುವದು."(ಯೆಶಾ.48:15).

6. "ತನ್ನ ಸಂತಾನವನ್ನು ನೋಡುವನು, ಚಿರಂಜೀವಿಯಾಗಿರು
ವನು. ನನ್ನ ಸಂಕಲ್ಪವು ಇವನ ಕೈಯಿಂದ ನೆರವೇರುವದು."
(ಯೆಶಾ.53:10).

7. "ನನ್ನ ಬಾಯಿಂದ ಹೊರಟ ಮಾತು ನನ್ನ ಇಷ್ಟಾರ್ಥವನ್ನು
ನೆರವೇರಿಸಿ ನಾನು ಉದ್ದೇಶಿಸಿದ್ದನ್ನು ಕೈಗೂಡಿಸಿದ ಹೊರತು ನನ್ನ
ಬಳಿ ವ್ಯರ್ಥವಾಗಿ ಹಿಂದಿರುಗದು."(ಯೆಶಾ.55:11).

8. "ಯೆಹೋವನೇ ನೀನು ಧರ್ಮಸ್ವರೂಪನಾಗಿರುವದರಿಂದ
ನಾನು ನಿನ್ನೊಡನೆ ವ್ಯಾಜ್ಯವಾಡಲಾರೆನು. ಆದರೂ ನಿನ್ನ ಸಂಗಡ
ನ್ಯಾಯವನ್ನು ಚರ್ಚಿಸುವೆನು. ದುಷ್ಟರ ನಡತೆಗೆ ಏಕೆ
ಸಫಲವಾಗುತ್ತದೆ?" (ಯೆರೆ.12:1).

9. "ಅವನು ತನ್ನ ಎಲ್ಲಾ ಕಾರ್ಯಗಳಲ್ಲಿಯೂ
ಸಾರ್ಥಕನಾದನು." (2 ಪೂರ್ವ.32:30).

10."ಅವನು ಅವರಿಗೆ- ಯೆಹೋವನು ನನ್ನ ಪ್ರಯಾಣವನ್ನು
ಸಫಲ ಮಾಡಿದ್ದಾನೆ; ಆದದರಿಂದ ನನ್ನನ್ನು ತಡೆಯಬೇಡಿರಿ."
(ಆದಿ.24:56).

## 52. ವೃದ್ಧಿಯಾಗುವಿ!

1. "ನೀತಿವಂತನು ಖರ್ಜೂರದ ಮರದಂತೆ ಬೆಳೆಯುವರು
ಲೆಬನೋನಿನ ದೇವದಾರು ವೃಕ್ಷದ ಹಾಗೆ ವೃದ್ಧಿಯಾಗುವರು."
(ಕೀರ್ತ.92:12)

2. "ತೊರೆಯ ಎರಡು ದಡಗಳಲ್ಲಿಯೂ ಸಕಲ ಫಲವೃಕ್ಷಗಳು
ಬೆಳೆಯುವವು."(ಯೆಹೆ.47:12).

3. "ಪ್ರೀತಿಯಿಂದ ಸತ್ಯವನ್ನನುಸರಿಸುತ್ತಾ ಬೆಳೆದು ಎಲ್ಲಾ
ವಿಷಯಗಳಲ್ಲಿಯೂ ಕ್ರಿಸ್ತನ ವಾಕ್ಯವನ್ನು ಹೊಂದುತ್ತಾ ಬರಬೇಕು."
(ಎಫೆ.4:15).

4. "ಅದು ಸಾಸಿವೆ ಕಾಳು ಎಲ್ಲಾ ಬೀಜಗಳಿಗಿಂತಲೂ
ಸಣ್ಣದಾಗಿದೆ, ಬೆಳೆದ ಮೇಲೆ ಕಾಯಿಪಲ್ಯದ ಗಿಡಗಳಿಗಿಂತ ದೊಡ್ಡದಾಗಿ
ಮರವಾಗುತ್ತದೆ." (ಮತ್ತಾ.13:32).

5. "ನೀವು ಸಕಲ ಸತ್ಕಾರ್ಯಗಳೆಂಬ ಫಲವನ್ನು ಕೊಡುತ್ತಾ
ದೇವ ಜ್ಞಾನದಿಂದ ಅಭಿವೃದ್ಧಿಯಾಗುತ್ತಿರಬೇಕೆಂತಲೂ...
ಬೇಡಿಕೊಳ್ಳುತ್ತೇವೆ," (ಕೊಲೊ.1:10).

6. "ಆ ಶಿರಸ್ಸಿನಿಂದಲೇ ದೇಹವೆಲ್ಲಾ ಕೀಲುನರಗಳ ಮೂಲ
ಬೇಕಾದ ಸಹಾಯವನ್ನು ಹೊಂದಿ ಒಂದಾಗಿ ಕೂಡಿಸಲ್ಪಟ್ಟು ದೇವ
ಕೊಡುವ ವೃದ್ಧಿಯಿಂದ ಅಭಿವೃದ್ಧಿಯಾಗುತ್ತಾ ಬರುತ್ತದೆ.
(ಕೊಲೊ.2:19).

7. "ಹಸು ಮಕ್ಕಳಂತೆ ಪಾರಮಾರ್ಥಿಕವಾದ ಶುದ್ಧ ಹಾಲನ
ಬಯಸಿರಿ. ಅದರಿಂದ ಬೆಳೆಯುತ್ತಾ ರಕ್ಷಣೆಯನ್ನು ಹೊಂದುವಿರಿ.
(1 ಪೇತ್ರ 2:2).

8. "ಆ ಬಾಲಕನು ಬೆಳೆದು ಬಲಗೊಂಡು ಜ್ಞಾನದಿಂ
ತುಂಬಿದವನಾದನು." (ಲೂಕ 2:40).

9. "ನೀತಿವಂತರು ಯೆಹೋವನ ಆಲಯದಲ್ಲಿ (ಸಸಿಗಳಂತ
ನೆಡಲ್ಪಟ್ಟವರು ನಮ್ಮ ದೇವರ ಅಂಗಳದಲ್ಲಿ ಚೆನ್ನಾಗಿ ಬೆಳೆಯುವರು.
(ಕೀರ್ತ.92:13).

10. "ನೀವು ಕೃಪೆಯಲ್ಲಿಯೂ ನಮ್ಮ ಕರ್ತನೂ ರಕ್ಷಕನ
ಆಗಿರುವ ಯೇಸುಕ್ರಿಸ್ತನ ವಿಷಯವಾದ ಜ್ಞಾನದಲ್ಲಿಯೂ
ಅಭಿವೃದ್ಧಿಯನ್ನು ಹೊಂದುತ್ತಾ ಇರಿ." (2 ಪೇತ್ರ 3:18).

## 53. ಯೌವನ!

1. "ಶ್ರೇಷ್ಠ ವರಗಳಿಂದ ನಿನ್ನ ಆಶೆಯನ್ನು ಪೂರ್ತಿಗೊಳಿಸುತ್ತಾನೆ.
ಹದ್ದಿಗೆ ಬರುವಂತೆಯೇ ನಿನಗೆ ಯೌವನವನ್ನು ತಿರಿಗಿ
ಬರಮಾಡುತ್ತಾನೆ." (ಕೀರ್ತ.103:5).

2. "ಯೌವನದಲ್ಲಿ ಹುಟ್ಟಿದ ಮಕ್ಕಳು ಯುದ್ಧವೀರನ ಕೈಯಲ್ಲಿರುವ ಅಂಬುಗಳಂತಿದ್ದಾರೆ." (ಕೀರ್ತ.127:4).

3. "ಯೌವನಸ್ಥನು ತನ್ನ ನಡತೆಯನ್ನು ಶುದ್ಧಪಡಿಸಿಕೊಳ್ಳುವದು ಯಾವದರಿಂದ ನಿನ್ನ ವಾಕ್ಯವನ್ನು ಗವನಿಸಿ ನಡೆಯುವದರಿಂದಲೇ."(ಕೀರ್ತ.119:9).

4. "ಯುವಕರಿಗೆ ಬಲವು ಭೂಷಣ. ಮುದುಕರಿಗೆ ನೆರೆಯು ...ಡವೆ." (ಜ್ಞಾನೋ.20:29).

5. "ದೇವರು ಆ ನಾಲ್ಕು ಮಂದಿ ಯುವಕರಿಗೆ ಸಕಲ ಶಾಸ್ತ್ರಗಳಲ್ಲಿಯೂ ವಿದ್ಯೆಗಳಲ್ಲಿಯೂ ಜ್ಞಾನ ವಿವೇಕಗಳನ್ನು ದಯಪಾಲಿಸಿದನು." (ದಾನಿ.1:17).

6. "ನಾನು ಯೌವನಸ್ಥನು, ನೀವು ಅತಿ ವೃದ್ಧರು ಆದದರಿಂದ ಸಂಕೋಚಪಟ್ಟು ನನ್ನ ಅಭಿಪ್ರಾಯವನ್ನು ನಿಮಗೆ ಅರಿಕೆ ಮಾಡಲು ಅಂಜಿದೆನು."(ಯೋಬ 32:6).

7. "ತರುವಾಯ ನಾನು ಎಲ್ಲಾ ಮನುಷ್ಯರ ಮೇಲೆ ನನ್ನ ಆತ್ಮವನ್ನು ಸುರಿಸುವೆನು. ನಿಮ್ಮಲ್ಲಿರುವ ಗಂಡಸರೂ ಹೆಂಗಸರೂ ಪ್ರವಾದಿಸು ವರು." (ಯೋವೇಲ 2:28).

8. "ಆಹಾ ಅವರ ಸೌಖ್ಯವೆಷ್ಟು? ಅವರ ಸೌಂದರ್ಯವೆಷ್ಟು? ಧಾನ್ಯವು ಯುವಕರನ್ನು ದ್ರಾಕ್ಷಾರಸವು ಯುವತಿಯರನ್ನು ಪುಷ್ಟಿಗೊಳಿಸುವದು."(ಜೆಕ.9:17).

9. "ಯೌವನಸ್ಥರೇ, ನೀವು ಶಕ್ತರಾಗಿರುವದರಿಂದಲೂ ನೀ
ಕೆಡುಕನನ್ನು ಜಯಿಸುವದರಿಂದಲೂ... ನಿಮಗೆ ಬರೆದಿದ್ದೇನೆ.
(1 ಯೋಹಾ.2:14).

10. "ಯೌವನದಲ್ಲಿಯೇ ನಿನ್ನ ಸೃಷ್ಟಿ ಕರ್ತನನ್ನು ಸ್ಮರಿಸು.
(ಪ್ರಸ.12:1).

## 54. ವಿವೇಕವನ್ನು ಕೊಡುವಾತನು!

1. "ನನ್ನ ವಿವೇಕ ಬೋಧೆಗೆ ಕಿವಿಕೊಡು. ಹೀಗಾದರೆ ನೀ
ಸುಬುದ್ಧಿಯನ್ನು ಕೈಗೊಳ್ಳುವಿ."(ಜ್ಞಾನೋ.5:1,2).

2. "ಮೂಢರೇ ಜಾಣತನವನ್ನು ಕಲಿತುಕೊಳ್ಳಿ
ಜ್ಞಾನಹೀನರೇ, ಬುದ್ಧಿಯನ್ನು ಗ್ರಹಿಸಿರಿ."(ಜ್ಞಾನೋ.8:5).

3. "ಜ್ಞಾನವೆಂಬ ನನಗೆ ಜಾಣ್ಮೆಯೇ. ನಿವಾಸ ಯುಕ್ತಿಗ
ತಿಳುವಳಿಕೆಯನ್ನು ಹೊಂದಿದ್ದೇನೆ."(ಜ್ಞಾನೋ.8:12).

4. "ಜಾಣನು ತಿಳಿದಿದ್ದನ್ನು ಗುಪ್ತಪಡಿಸುವನು. ಮೂಢ
ಮನಸ್ಸು ಮೂರ್ಖತನವನ್ನು ಪ್ರಕಟಿಸುವದು."(ಜ್ಞಾನೋ.12:23)

5. "ಪ್ರತಿಯೊಬ್ಬ ಜಾಣನು ತನ್ನ ಕೆಲಸವನ್ನು ತಿಳುವಳಿಕೆಯಿಂ
ನಡಿಸುವನು."(ಜ್ಞಾನೋ.13:16).

6. "ಮನೆಯನ್ನು ಕಟ್ಟುವದಕ್ಕೆ ಜ್ಞಾನವೇ ಸಾಧನ. ಅದನ
ಸ್ಥಿರಪಡಿಸುವದಕ್ಕೆ ವಿವೇಕವೇ ಆಧಾರ." (ಜ್ಞಾನೋ.24:3).

7. "ಧರ್ಮೋಪದೇಶವನ್ನು ಕೈಕೊಳ್ಳುವವನು ವಿವೇಕಿಯಾದ ಮಗನು." (ಜ್ಞಾನೋ.28:7).

8. "ಮನುಷ್ಯ ಮಾತ್ರದವನಿಂದ ದೇವರಿಗೆ ಏನು ಪ್ರಯೋಜನವಾದೀತು? ಒಬ್ಬನು ವಿವೇಕಿಯಾಗಿ ನಡೆದುಕೊಂಡರೆ ಅವನಿಗೆ ಪ್ರಯೋಜನವಷ್ಟೇ." (ಯೋಬ 22:2).

9. "ಸ್ವಾಮಿ ಹೇಳಿದ್ದೇನಂದರೆ- ಹೊತ್ತುಹೊತ್ತಿಗೆ ಆಹಾರಕ್ಕೆ ಬೇಕಾದದ್ದನ್ನು ಅಳೆದು ಕೊಡುವದಕ್ಕಾಗಿ ಯಜಮಾನನು ತನ್ನ ಮನೆಯವರ ಮೇಲೆ ನೇಮಿಸಿದ ನಂಬಿಗಸ್ತನೂ ವಿವೇಕಿಯೂ ಆಗಿರುವ ಮನೆವಾರ್ತೆಯವನು ಯಾರು?" (ಲೂಕ 12:42).

10. "ಪುರುಷರೇ, ಸ್ತ್ರೀಯು ಪುರುಷನಿಗಿಂತ ಬಲಹೀನಳೆಂಬದನ್ನು ಜ್ಞಾಪಕ ಮಾಡಿಕೊಂಡು ನಿಮ್ಮ ಹೆಂಡತಿಯರ ಸಂಗಡ ವಿವೇಕದಿಂದ ಒಗತನ ಮಾಡಿರಿ." (1 ಪೇತ್ರ 3:7).

## 55. ಮರುಭೂಮಿಯು ಫಲವತ್ತಾಗುವದು!

1. "ಅರಣ್ಯವೂ ಮರುಭೂಮಿಯೂ ಆನಂದಿಸುವವು- ಬಣನೆಲವು ಹರ್ಷಿಸಿ ತಾವರೆಯಂತೆ ಕಳಕಳಿಸುವದು." (ಯೆಶಾ.35:1)

2. "ಬಳಿಕ ಉನ್ನತ ಲೋಕದಿಂದ ದಿವ್ಯಾತ್ಮಧಾರೆಯು ನಮ್ಮ ಮೇಲೆ ಸುರಿಸಲ್ಪಡುವದು. ಆಗ ಅರಣ್ಯವು ತೋಟವಾಗುವದು." (ಯೆಶಾ.32:15).

3. "ಬೋಳು ಗುಡ್ಡಗಳಲ್ಲಿ ನದಿಗಳನ್ನು, ತಗ್ಗುಗಳಲ್ಲಿ ಒರತೆಗಳನ್ನು ಹೊರಡಿಸಿ ಅರಣ್ಯವನ್ನು ಕೆರೆಯನ್ನಾಗಿಯೂ ಮರುಭೂಮಿಯನ್ನು ಬುಗ್ಗೆಗಳಾಗಿಯೂ ಮಾಡುವೆನು." (ಯೆಶಾ.41:18).

4. "ಕೊರಕಲ ನೆಲವು ಸಮವಾಗುವದು. ಯೆಹೋವನ ಮಹಿಮೆಯು ಗೋಚರವಾಗುವದು. ಎಲ್ಲಾ ಮನುಷ್ಯರೂ ಒಟ್ಟಾಗಿ ಅದನ್ನು ಕಾಣುವರು."(ಯೆಶಾ.40:4,5).

5. "ಅರಣ್ಯದಲ್ಲಿ ಒರತೆಗಳು ಒಡೆಯುವವು. ಒಣ ನೆಲದಲ್ಲಿ ನದಿಗಳು ಹುಟ್ಟಿ ಹರಿಯುವವು. ಬೆಂಗಾಡು ಸರೋವರವಾಗುವದು." (ಯೆಶಾ.35:6).

6. "ನಾನು ಅರಣ್ಯದಲ್ಲಿ ಮಾರ್ಗವನ್ನು ನಿರ್ಮಿಸಿ, ಅಡವಿಯಲ್ಲಿ ನದಿಗಳನ್ನು ಹರಿಸುವೆನು."(ಯೆಶಾ.43:19).

7. "ಬತ್ತಿದ ಭೂಮಿಯಲ್ಲಿ ಮಳೆಗರೆದು ಒಣ ನೆಲದಲ್ಲಿ ಕಾಲುವೆಗಳನ್ನು ಹರಿಸುವೆನು."(ಯೆಶಾ.44:3).

8. "ಯೆಹೋವನು ಚೀಯೋನನ್ನು ಸಂತೈಸೇ ಸಂತೈಸುವನು. ಅಲ್ಲಿನ ಹಾಳು ಪ್ರದೇಶಗಳನ್ನೆಲ್ಲಾ ಸುಧಾರಿಸಿ, ಕಾಡು ನೆಲವನ್ನು ಏದೆನ್ ಉದ್ಯಾನದಂತೆಯೂ ಬೀಳು ಭೂಮಿಯನ್ನು ಯೆಹೋವನ ವನದ ಹಾಗೂ ಕಳಕಳಿಸುವಂತೆ ಮಾಡುವೆನು." (ಯೆಶಾ.51:3).

9. "ಭೂಜಂತುಗಳೇ ಅಂಜಬೇಡಿರಿ. ಕಾಡಿನ ಕಾವಲಲ್ಲಿ ಹುಲ್ಲು ಮೊಳೆಯುವದು. ಮರವು ಹಣ್ಣು ಬಿಡುವದು. ಅಂಜೂರದ ಗಿಡವೂ ದ್ರಾಕ್ಷಾಲತೆಯೂ ಸಾರವತ್ತಾಗಿ ಫಲಿಸುವವು." (ಯೋವೇ.2:22).

10. "ಒಬ್ಬ ಪುರುಷನು ಗಾಳಿಯಲ್ಲಿ ಮರೆಯುವಂತೆಯೂ ಅತಿವೃಷ್ಟಿಯಲ್ಲಿ ಆವರಣದ ಹಾಗೂ ಮರುಭೂಮಿಯಲ್ಲಿ ನೀರಿನ ಕಾಲುವೆಗಳ ಪ್ರಕಾರವೂ ಬೆಂಗಾಡಿನಲ್ಲಿ ದೊಡ್ಡ ಬಂಡೆಯ ನೆರಳಿನೋಪಾದಿಯಲ್ಲಿಯೂ ಇರುವನು."(ಯೆಶಾ.32:2).

## 56. ಮಾರ್ಗ ನಡಿಸುವನು!

1. "ಇಗೋ, ದಾರಿಯಲ್ಲಿ ನಿಮ್ಮನ್ನು ಕಾಪಾಡುವದಕ್ಕೂ ನಾನು ಗೊತ್ತು ಮಾಡಿರುವ ಸ್ಥಳಕ್ಕೆ ಕರೆತರುವದಕ್ಕೂ ದೂತನನ್ನು ನಿಮ್ಮ ಮುಂದುಗಡೆಯಲ್ಲಿ ಕಳುಹಿಸುತ್ತೇನೆ." (ವಿಮೋ.23:20).

2. "ಯೆಹೋವನು, ಹಗಲು ಹೊತ್ತಿನಲ್ಲಿ ದಾರಿ ತೋರಿಸುವದಕ್ಕೆ ಮೇಘಸ್ತಂಭದಲ್ಲಿಯೂ ರಾತ್ರಿ ವೇಳೆಯಲ್ಲಿ ಬೆಳಕು ಕೊಡುವದಕ್ಕೆ ಅಗ್ನಿ ಸ್ತಂಭದಲ್ಲಿಯೂ ಇದ್ದು ಅವರ ಮುಂಭಾಗದಲ್ಲಿ ಹೋದನು." (ವಿಮೋ.13:21).

3. "ದೇವರು ನನ್ನ ಸಂಗಡ ಇದ್ದು ನಾನು ಹೋಗುವ ಈ ಮಾರ್ಗದಲ್ಲಿ ನನ್ನನ್ನು ಕಾಪಾಡಿ ತಿನ್ನುವದಕ್ಕೆ ಆಹಾರವನ್ನೂ ಉಡುವದಕ್ಕೆ ವಸ್ತ್ರವನ್ನೂ ಕೊಟ್ಟು ತಿರಿಗಿ ನನ್ನನ್ನು ತಂದೆಯ ಮನೆಗೆ ಸುರಕ್ಷಿತವಾಗಿ ಬರಮಾಡಿದರೆ ಯೆಹೋವನೇ ನನ್ನ ದೇವರಾಗಿರುವನು." (ಆದಿ.28:20,21).

4. "ನಿನ್ನ ಮಾರ್ಗದಲ್ಲೇ ಹೆಜ್ಜೆಯಿಟ್ಟು ನಡೆಯುತ್ತಾ ಇದ್ದೇನೆ. ನನ್ನ ಕಾಲು ಜಾರಲಿಲ್ಲ."(ಕೀರ್ತ.17:5).

5. "ಆತನು ಮೋಶೆಗೆ ತನ್ನ ಮಾರ್ಗವನ್ನೂ ಇಸ್ರಾಯೆಲ್ಯರಿಗೆ ತನ್ನ ಕೃತ್ಯಗಳನ್ನೂ ಪ್ರಕಟಿಸಿದನು."(ಕೀರ್ತ.103:7).

6. "ಜನವಿರುವ ಊರನ್ನು ಸೇರುವಂತೆ ಅವರನ್ನು ಸರಿಯಾದ ದಾರಿಯಲ್ಲೆ ನಡೆಸಿದನು."(ಕೀರ್ತ.107:7).

7. "ಯೇಸು ಅವನಿಗೆ- ನಾನೇ ಮಾರ್ಗವೂ ಸತ್ಯವೂ ಜೀವವೂ ಆಗಿದ್ದೆನೆ. ನನ್ನ ಮುಲಕವಾಗಿ ಹೊರತು ಯಾರು ತಂದೆಯ ಬಳಿಗೆ ಬರುವದಿಲ್ಲ." (ಯೋಹಾ.14:6).

8. "ನಾವು ದಾಸತ್ವದಲ್ಲಿದ್ದ ಐಗುಪ್ತದಿಂದ ನಮ್ಮನ್ನೂ ನಮ್ಮ ಪಿತೃಗಳನ್ನೂ ಹೊರತಂದು ನಮ್ಮೆದುರಿನಲ್ಲಿಯೇ ಮಹತ್ಕಾರ್ಯಗಳನ್ನು ನಡಿಸಿ ನಮ್ಮ ಎಲ್ಲಾ ಪ್ರಯಾಣಗಳಲ್ಲಿಯೂ ದಾಟಿ ಬಂದ ಅನ್ಯ ಜನಾಂಗಗಳ ಮಧ್ಯದಲ್ಲಿಯೂ ನಮ್ಮನ್ನು ಕಾಪಾಡಿದನು." (ಯೆಹೋ.24:17).

9. "ಯೆಹೋವನು ದಯಾಳುವೂ ಸತ್ಯಸ್ವರೂಪನು ಆಗಿದ್ದಾನೆ. ದಾರಿ ತಪ್ಪಿದವರನ್ನು ಬೋಧಿಸಿ ಸನ್ಮಾರ್ಗದಲ್ಲಿ ನಡಿಸುವನು." (ಕೀರ್ತ.25:8).

10."ಯೆಹೋವನು ನಿನ್ನನ್ನು ಉಪದೇಶಿಸಿ ನಡೆಯಬೇಕಾದ ಮಾರ್ಗವನ್ನು ತಿಳಿಸುವನು." (ಕೀರ್ತ.32:8).

## 57. ಉದ್ಧೇಶಗಳು (ಆಲೋಚನೆಗಳು)!

1. "ನಿನ್ನ ಕಾರ್ಯಭಾರವನ್ನು ಯೆಹೋವನಿಗೆ ವಹಿಸಿದರೆ ನಿನ್ನ ಉದ್ದೇಶಗಳು ಸಫಲವಾಗುವವು."(ಜ್ಞಾನೋ.16:3).

2. ‘‘ಯೆಹೋವನೇ ನಿನ್ನ ಕೃತ್ಯಗಳು ಎಷ್ಟೋ ಶ್ರೇಷ್ಠವಾಗಿವೆ. ನಿನ್ನ ಆಲೋಚನೆಗಳು ಅಶೋಧ್ಯವಾಗಿವೆ, ಪಶುಪ್ರಾಯನು ಅರಿಯನು ಹುಚ್ಚನು ತಿಳಿಯನು.’’ (ಕೀರ್ತ.92:5,6).

3. ‘‘ನಮ್ಮ ಹಿತಕ್ಕಾಗಿ ನೀನು ಮಾಡಿದ ಆಲೋಚನೆಗಳೂ, ಅದ್ಭುತ ಕಾರ್ಯಗಳೂ ಎಷ್ಟೋ ವಿಶೇಷವಾಗಿವೆ. ಅವುಗಳನ್ನು ವಿವರಿಸಿ ಹೇಳೋಣವೆಂದರೆ ಅಸಾಧ್ಯವು. ಅವು ಅಸಂಖ್ಯಾತವಾಗಿವೆ.’’ (ಕೀರ್ತ.40:5).

4. ‘‘ಉದ್ದೇಶಗಳು ಮಂತ್ರಾಲೋಚನೆಯಿಂದ ನೆರವೇರುವವು. ಮಂತ್ರಾಲೋಚನೆಯಿಂದಲೇ ಯುದ್ಧವನ್ನು ನಡಿಸು.’’ (ಜ್ಞಾನೋ.20:18).

5. ‘‘ಸೇನಧೀಶ್ವರನಾದ ಯೆಹೋವನೆಂಬದು ನಿನ್ನ ನಾಮಧೇಯ. ನೀನು ಆಲೋಚನೆಯಲ್ಲಿ ಶ್ರೇಷ್ಟನು, ಕಾರ್ಯದಲ್ಲಿ ಸಮರ್ಥನು; ನೀನು ಪ್ರತಿಯೊಬ್ಬನಿಗೂ ಅವನವನ ಕರ್ಮಕ್ಕೂ ನಡತೆಗೂ ತಕ್ಕ ಫಲವನ್ನು ಕೊಡಬೇಕೆಂದು ನರಜನ್ಮದವರ ಮಾರ್ಗವನ್ನೆಲ್ಲಾ ಕಣ್ಣಾರೆ ನೋಡುತ್ತೀ.’’ (ಯೆರೆ.32:19).

6. ‘‘ಈ ವಿವೇಕವು ಸಹ ಅತಿಶಯಾಲೋಚನಾಪರನೂ ಸುಜ್ಞಾನ ಶ್ರೇಷ್ಟನೂ ಆಗಿರುವ ಸೇನಾಧೀಶ್ವರನಾದ ಯೆಹೋವನಿಂದಲೇ ಉಂಟಾಗುತ್ತವೆ.’’ (ಯೆಶಾ.28:29).

7. ‘‘ಆತನು ಕತ್ತಲೆಯಲ್ಲಿರುವ ಗುಪ್ತಕಾರ್ಯಗಳನ್ನು ಬೆಳಕಿಗೆ ತರುವನು. ಹೃದಯದ ಯೋಚನೆಗಳನ್ನು ಪ್ರತ್ಯಕ್ಷ ಪಡಿಸುವನು.

ಆ ಕಾಲದಲ್ಲಿ ಪ್ರತಿಯೊಬ್ಬನಿಗೆ ಬರತಕ್ಕ ಹೊಗಳಿಕೆಯು ದೇವರಿಂದ ಬರುವದು.'' (1ಕೊರಿ.4:5).

8. ''ಆ ಗಳಿಗೆಯಲ್ಲಿ ನಿಮಗೆ ಸೂಚನೆಯಾಗುವಂಥ ಮಾತನ್ನೆ ಆಡಿರಿ. ಮಾತಾಡುವವರು ನೀವಲ್ಲ, ಪವಿತ್ರಾತ್ಮನೇ.'' (ಮಾರ್ಕ.13:11).

9. ''ಆಹಾ, ದೇವರ ಐಶ್ವರ್ಯವು ಜ್ಞಾನವೂ ವಿವೇಕವೂ ಎಷ್ಟೋ ಅಗಾಧ! ಆತನ ತೀರ್ಮಾನಗಳು ಪರಿಶೋಧನೆಗೆ ಎಷ್ಟೋ ಅಗಮ್ಯ! ಆತನ ಮಾರ್ಗಗಳು ಕಂಡುಹಿಡಿಯುವದು ಎಷ್ಟೋ ಅಸಾಧ್ಯ. ಯೆಹೋವನ ಮನಸ್ಸನ್ನು ತಿಳಿದುಕೊಂಡವರಾರು? ಆತನಿಗೆ ಆಲೋಚನಾ ಕರ್ತನು ಯಾರು?'' (ರೋಮಾ.11:33).

10.''ಆಗ ಎಲ್ಲಾ ಗ್ರಹಿಕೆಯನ್ನು ಮೀರುವ ದೇವಶಾಂತಿಯು ನಿಮ್ಮ ಹೃದಯಗಳನ್ನೂ ಯೋಚನೆಗಳನ್ನೂ ಕ್ರಿಸ್ತ ಯೇಸುವಿನಲ್ಲಿ ಕಾಯುವದು.''(ಫಿಲಿ.4:7).

## 58. ಮುದ್ರೆ!

1. ''ನನ್ನ ಪ್ರಿಯಳು, ನನ್ನ ಮದಲಗಿತ್ತಿಯು ಅಗುಳಿ ಹಾಕಿದ ಉದ್ಯಾನ. ಬೇಲಿಯೊಳಗಿನ ಬುಗ್ಗೆ, ಮುಚ್ಚಿ ಮುದ್ರಿಸಿದ ಬಾವಿ ಆಗಿದ್ದಾಳೆ.'' (ಪರಮ.4:12).

2. ''ನಿನ್ನ ಹೃದಯದ ಮೇಲೆ, ನಿನ್ನ ಕೈಯಲ್ಲಿ ನನ್ನನ್ನು ಮುದ್ರೆಯನ್ನಾಗಿ ಧರಿಸಿಕೋ.''(ಪರಮ.8:6).

3. " ದೈವದರ್ಶನವೆಲ್ಲಾ ಮುದ್ರೆ ಹಾಕಿದ ಶಾಸ್ತ್ರದ ಮಾತಿನ ಹಾಗಿದೆ. ಅಕ್ಷರ ಬಲ್ಲವನಿಗೆ ದಯೆಮಾಡಿ ಅದನ್ನು ಓದೆಂದು ಒಪ್ಪಿಸಿದರೆ ಅವನು ಮುದ್ರೆ ಹಾಕಿದೆಯಲ್ಲಾ ಆಗುವುದಿಲ್ಲ ಅನ್ನುವನು."(ಯೆಶಾ.29:11).

4. "ಆತನ ಸಾಕ್ಷಿಯನ್ನು ಒಪ್ಪಿದವನು ದೇವರು ಸತ್ಯವಂತನೆಂಬ ಮಾತಿಗೆ ಮುದ್ರೆ ಹಾಕಿದವನಾಗಿದ್ದಾನೆ." (ಯೋಹಾ.3:33).

5. "ಸೇನಾಧೀಶ್ವರನಾದ ಯೆಹೋವನು ಇಂತೆನ್ನುತ್ತಾನೆ-ಶೆಯಲ್ತಿಯೇಲಿನ ಮಗನೂ ನನ್ನ ಸೇವಕನೂ ಆದ ಜೆರುಬ್ಬಾಬೆಲನೇ, ಆ ದಿನದಲ್ಲಿ ನಾನು ನಿನ್ನನ್ನು ತೆಗೆದುಕೊಂಡು ಮುದ್ರೆಯುಂಗುರವಾಗಿ ಮಾಡಿಕೊಳ್ಳುವೆನು... ಇದು ಯೆಹೋವನ ನುಡಿ." (ಹಗ್ಗಾ.2:23).

6. "ಆತನು ನಮ್ಮ ಮೇಲೆ ಮುದ್ರೆ ಹಾಕಿ ನಮ್ಮ ಹೃದಯಗಳಲ್ಲಿ ಪವಿತ್ರಾತ್ಮನನ್ನು ಸಂಚಕಾರವಾಗಿ ಅನುಗ್ರಹಿಸಿದ್ದಾನೆ." (2ಕೊರಿ.1:22).

7. "ನಿಮ್ಮ ರಕ್ಷಣೆಯ ವಿಷಯವಾದ ಸುವಾರ್ತೆಯೆಂಬ ಸತ್ಯವಾಕ್ಯವನ್ನು ಕೇಳಿ ಕ್ರಿಸ್ತನಲ್ಲಿ ನಂಬಿಕೆಯಿಟ್ಟವರಾದ ನೀವು ಸಹ ವಾಗ್ದಾನ ಮಾಡಲ್ಪಟ್ಟ ಪವಿತ್ರಾತ್ಮನೆಂಬ ಮುದ್ರೆಯನ್ನು ಹೊಂದಿದ್ದೀರಿ." (ಎಫೆ.1:13).

8. "ದೇವರ ಪವಿತ್ರಾತ್ಮನನ್ನು ದುಃಖಪಡಿಸಬೇಡಿರಿ. ಆತನಲ್ಲಿಯೇ ವಿಮೋಚನೆಯ ದಿನಕ್ಕಾಗಿ ಮುದ್ರೆ ಹೊಂದಿದ್ದೀರಲ್ಲಾ." (ಎಫೆ.4:30).

9. "ಬೋಧನೆಯನ್ನು ಕಟ್ಟಿಡು. ನನ್ನ ಶಿಷ್ಯರೊಳಗೆ ಉಪದೇಶವನ್ನು ಮುಚ್ಚಿ ಮುದ್ರಿಸು." (ಯೆಶಾ.8:16).

10. "ಆತನು ತನ್ನ ಕೆಲಸವನ್ನು ಎಲ್ಲರೂ ತಿಳಿದುಕೊಳ್ಳಬೇಕೆಂದು ಪ್ರತಿಯೊಬ್ಬನ ಕೈಯನ್ನು ಮುದ್ರಿಸುವನು."(ಯೋಬ 37:7).

## 59. ವಾದ ಮಾಡುವನು!

1. "ಯೆಹೋವನೇ, ನನ್ನ ಸಂಗಡ ವ್ಯಾಜ್ಯವಾಡುವವರೊಡನೆ ವ್ಯಾಜ್ಯವಾಡು. ನನ್ನ ಮೇಲೆ ಯುದ್ಧ ಮಾಡುವವರ ಸಂಗಡ ಯುದ್ಧ ಮಾಡು." (ಕೀರ್ತ.35:1).

2. "ನನ್ನ ನ್ಯಾಯವನ್ನು ದೇವರ ಮುಂದೆಯೂ ಮಾನವನ್ನು ನ್ಯಾಯವನ್ನು ಅವನ ಮಿತ್ರನ ಮುಂದೆಯೂ ಸ್ಥಾಪಿಸಲಿ ಎಂದು ದೇವರಿಗೇನೇ ಕಣ್ಣೀರು ಸುರಿಸುತ್ತೇನೆ." (ಯೋಬ 16:21).

3. "ದೇವರೇ, ನ್ಯಾಯವನ್ನು ನಿರ್ಣಯಿಸು. ನನಗೋಸ್ಕರ ವ್ಯಾಜ್ಯವನ್ನು ನಡಿಸಿ ನಿರ್ದಯವಾದ ಜನಾಂಗದಿಂದ ತಪ್ಪಿಸು." (ಕೀರ್ತ.43:1).

4. "ಯೆಹೋವನೇ, ನೀನು ನನ್ನ ವ್ಯಾಜ್ಯಗಳನ್ನು ನಡಿಸಿ ನನ್ನ ಪ್ರಾಣವನ್ನು ಉಳಿಸಿದ್ದೀ. ಕರ್ತನೇ, ನನಗಾದ ಅನ್ಯಾಯವನ್ನು ನೋಡಿದ್ದೀ. ನನಗೆ ನ್ಯಾಯ ತೀರಿಸು." (ಪ್ರಲಾ.3:59).

5. "ಸದಾಚಾರವನ್ನು ಅಭ್ಯಾಸ ಮಾಡಿರಿ. ನ್ಯಾಯ ನಿರತರಾಗಿರಿ. ಹಿಂಸಕನನ್ನು ತಿದ್ದಿ ಸರಿಪಡಿಸಿರಿ. ಅನಾಥರಿಗೆ ನ್ಯಾಯ ತೀರಿಸಿರಿ. ವಿಧವೆಯ ಪಕ್ಷವಾಗಿ ವಾದಿಸಿರಿ." (ಯೆಶಾ.1:17).

6. ''ಯಾಕೋಬ್ಯರ ಅರಸನಾದ ಯೆಹೋವನು ಹೀಗನ್ನುತ್ತಾನೆ. ನಿಮ್ಮ ವ್ಯಾಜ್ಯವು ಈಚೆಗೆ ಬರಲಿ. ನಿಮ್ಮ ಬಲವಾದ ನ್ಯಾಯಗಳನ್ನು ತೋರ್ಪಡಿಸಿರಿ. ತಮ್ಮ ನ್ಯಾಯಗಳನ್ನು ಮುಂದಕ್ಕೆ ತರಲಿ. ಭವಿಷ್ಯತ್ತನ್ನು ನಮಗೆ ತಿಳಿಸಲಿ.''(ಯೆಶಾ.41:21,22).

7. ''ನನ್ನ ವ್ಯಾಜ್ಯದಲ್ಲಿ ನೀನು ನ್ಯಾಯವನ್ನು ಸ್ಥಾಪಿಸಿದಿ. ನೀನು ಆಸನಾರೂಢನಾಗಿ ನೀತಿಯಿಂದ ನ್ಯಾಯವನ್ನು ನಿರ್ಣಯಿಸುತ್ತೀ,'' (ಕೀರ್ತ.9:4).

8. ''ನಿಮ್ಮಲ್ಲಿ ಒಬ್ಬನಿಗೆ ಮತ್ತೊಬ್ಬನ ಮೇಲೆ ವ್ಯಾಜ್ಯವಿದ್ದರೆ ನ್ಯಾಯ ವಿಚಾರಣೆಗೆ ದೇವಜನರ ಮುಂದೆ ಹೋಗದೆ ಅನ್ಯ ಜನರ ಮುಂದೆ ಹೋಗುವದಕ್ಕೆ ಅವನಿಗೆ ಧೈರ್ಯವುಂಟೋ?'' (1 ಕೊರಿ.6:1).

9. ''ಯೆಹೋವನು ದೀನರ ವ್ಯಾಜ್ಯವನ್ನು ನಡಿಸುವನೆಂತಲೂ ಬಡವರ ನ್ಯಾಯವನ್ನು ಸ್ಥಾಪಿಸುವನೆಂತಲೂ ಬಲ್ಲೆನು.'' (ಕೀರ್ತ.140:12).

10.''ನ್ಯಾಯಧಿಪತಿಗಳನ್ನು ಹುಚ್ಚರನ್ನಾಗಿ ಮಾಡುವೆನು.'' (ಯೋಬ.12:17).

## 60. ಯೆಹೋವನು ಶಕ್ತನು!

1. ''ಯೆಹೋವನಾದ ನಾನೇ ನಿನ್ನ ರಕ್ಷಕನು ನಿನ್ನ ವಿಮೋಚಕನು. ಯಾಕೋಬ್ಯರ ಶೂರನು ಎಂದು ನರಜನ್ಮದರರೆಲ್ಲರಿಗೂ ಗೊತ್ತಾಗುವದು.'' (ಯೆಶಾ.49:26).

2. "ಅವನು ನಿರ್ದೋಷಿಯಾಗಿ ನಿಲ್ಲಿಸಲ್ಪಡುವನು. ಅವನನ್ನು ನಿಲ್ಲಿಸುವದಕ್ಕೆ ಯೆಹೋವನು ಶಕ್ತನಾಗಿದ್ದಾನೆ." (ರೋಮಾ.14:4).

3. "ಆತನು ನಿಮ್ಮನ್ನು ಕುರಿತು ನಿರ್ಬಲನಾಗಿರದೆ ಬಲವಾದ ಕೆಲಸಗಳನ್ನು ನಿಮ್ಮಲ್ಲಿ ನಡಿಸುವವನಾಗಿದ್ದಾನೆ." (2 ಕೊರಿ.13:3).

4. "ನನಗಿಂತ ಶಕ್ತನು ನನ್ನ ಹಿಂದೆ ಬರುತ್ತಾನೆ. ಆತನ ಕೆರಗಳ ಬಾರನ್ನು ಬೊಗ್ಗಿಕೊಂಡು ಬಿಚ್ಚುವದಕ್ಕೂ ನಾನು ಯೋಗ್ಯನಲ್ಲ." (ಮಾರ್ಕ.1:7).

5. "ಆತನಲ್ಲಿ ಜ್ಞಾನವೂ ಶಕ್ತಿಯೂ ಉಂಟು. ಆಲೋಚನೆಯೂ ವಿವೇಕವು ಅತನವೇ." (ಯೋಬ 12:13).

6. "ಸ್ವಶಕ್ತಿಯಿಂದ ಸಮುದ್ರವನ್ನು ಭೇದಿಸುವವನು ನೀನು. ಜಲರಾಶಿಗಳ ಮೇಲೆ ತಿಮಿಂಗಿಲಗಳ ತಲೆಗಳನ್ನು ಜಜ್ಜಿಬಿಟ್ಟವನು ನೀನೇ." (ಕೀರ್ತ.74:13).

7. "ಅಬ್ರಹಾಮನು ದೇವರನ್ನು ಘನಪಡಿಸುವವನಾಗಿ ಆತನು ತನ್ನ ವಾಗ್ದಾನವನ್ನು ನೆರವೇರಿಸುವದಕ್ಕೆ ಸಮರ್ಥನೆಂದು ಪೂರಾ ಭರವಸವಿಟ್ಟು ದೃಢನಂಬಿಕೆಯುಳ್ಳವನಾದನು." (ರೋಮಾ.4:21).

8. "ಆದಕರಣ ಆತನು ತನ್ನ ಮೂಲಕ ದೇವರ ಬಳಿಗೆ ಬರುವವರನ್ನು ಸಂಪೂರ್ಣವಾಗಿ ರಕ್ಷಿಸುವದಕ್ಕೆ ಶಕ್ತನಾಗಿದ್ದಾನೆ."(ಇಬ್ರಿ.7:25).

9. "ನಾನು ನಂಬುವಾತನನ್ನು ಬಲ್ಲೆನು. ಆತನು ಆ ದಿನಕ್ಕಾಗಿ ಕಾಪಾಡುವದಕ್ಕೆ ಶಕ್ತನಾಗಿದ್ದಾನೆಂದು ದೃಢವಾಗಿ ನಂಬಿದ್ದೇನೆ." (2 ತಿಮೊ.1:12).

10. "ತಾನೆ ಶೋಧಿಸಲ್ಪಟ್ಟು ಬಾಧೆಯನ್ನು ಅನುಭವಿಸಿದ್ದರಿಂದ ಶೋಧಿಸಲ್ಪಡುವವರಿಗೆ ಸಹಾಯ ಮಾಡುವದಕ್ಕೆ ಶಕ್ತನಾಗಿದ್ದಾನೆ." (ಇಬ್ರಿ.2:18).

## 61. ನಿವಾಸಗಳು!

1. "ಸೇನಾಧೀಶ್ವರನಾದ ಯೆಹೋವನೇ, ನಿನ್ನ ನಿವಾಸಗಳು ಎಷ್ಟೋ ರಮ್ಯವಾಗಿವೆ." (ಕೀರ್ತ.84:1).

2. "ಸಾರವುಳ್ಳ ಭೂಮಿಯೂ ಮೇಲಿನಿಂದ ಬೀಳುವ ಆಕಾಶದ ಮಂಜೂ ಇರುವ ಸ್ಥಳದಲ್ಲಿ ನಿನ್ನ ನಿವಾಸವಿರುವದು." (ಆದಿ.27:40).

3. "ನನ್ನ ಜನರು ಸಮಾಧಾನ ನಿವಾಸದಲ್ಲಿಯೂ ನಿರ್ಭಯ ನಿಲಯಗಳಲ್ಲಿಯೂ ನೆಮ್ಮದಿಯ ಆಶ್ರಯಗಳಲ್ಲಿಯೂ ನೆಲೆಗೊಳ್ಳುವರು." (ಯೆಶಾ.32:18).

4. "ಜ್ಞಾನಿಯ ನಿವಾಸದಲ್ಲಿ ಎಣ್ಣೆಯೂ ಶ್ರೇಷ್ಠ ಸಂಪತ್ತು ಇರುವವು."(ಜ್ಞಾನೋ.21:20).

5. "ಯೆಹೋವನು ದುಷ್ಟನ ಮನೆಯನ್ನು ಶಪಿಸುವನು. ನೀತಿವಂತನ ನಿವಾಸವನ್ನೋ ಆಶೀರ್ವದಿಸುವನು." (ಜ್ಞಾನೋ.3:33).

6. "ಸಾಲೇಮಿನಲ್ಲಿ ಆತನ ಬಿಡಾರವಿದೆ. ಚಿಯೋನಿನಲ್ಲಿ ಆತನು ನಿವಾಸಿಸುತ್ತನೆ."(ಕೀರ್ತ.76:2).

7. "ನಾನು ನಿಮ್ಮ ನಡುವೆ ನಿವಾಸ ಮಾಡುವೆನು. ನಿಮ್ಮನ್ನು ತಳ್ಳಿಬಿಡುವದಿಲ್ಲ. ನಿಮ್ಮ ನಡುವೆ ತಿರುಗಾಡುತ್ತಾ ನಿಮಗೆ ದೇವರಾಗಿರುವೆನು." (ಯಾಜ.26:11,12).

8. "ಆತನು ಯಾಕೋಬ್ ವಂಶದವರ ಎಲ್ಲಾ ನಿವಾಸಗಳಿಗಿಂತ ಚೀಯೋನಿನ ದ್ವಾರಗಳನ್ನು ಹೆಚ್ಚಾಗಿ ಪ್ರೀತಿಸುತ್ತಾನೆ." (ಕೀರ್ತ.87:2).

9. "ನಿನ್ನ ಸತ್ಯಪ್ರಸನ್ನತೆಗಳನ್ನು ದೂತರನ್ನೋ ಎಂಬಂತೆ ಕಳುಹಿಸು. ಅವೇ ನಿನ್ನ ಪರಿಶುದ್ಧ ಪರ್ವತಕ್ಕೆ ನನ್ನನ್ನು ಕರೆದುಕೊಂಡು ಹೋಗಿ ನಿನ್ನ ನಿವಾಸಕ್ಕೆ ಸೇರಿಸಲಿ."(ಕೀರ್ತ.43:3).

10."ಸದಮಲನೆನಿಕೊಂಡು ಶಾಶ್ವತ ಲೊಕದಲ್ಲಿ ನಿತ್ಯ ನಿವಾಸಿಯಾದ ಮಹೋನ್ನತನು ಉನ್ನತ ಲೋಕವೆಂಬ ಪವಿತ್ರಾಲಯದಲ್ಲಿ ವಾಸಿಸುವ ನಾನು ಜಜ್ಜಿಹೋದ ದೀನ ಮನದೊಂದಿಗೆ ಇದ್ದುಕೊಂಡು ದೀನನ ಆತ್ಮವನ್ನು ಜಜ್ಜಿಹೋದವನ ಮನಸ್ಸನ್ನೂ ಉಜ್ಜೀವಿಸುವವನಾಗಿದ್ದೇನೆ." (ಯೆಶಾ.57:15).

## 62. ಬಿಡುಗಡೆಮಾಡುವಾತನು!

1. "ಮಗನು ನಿಮ್ಮನ್ನು ಬಿಡುಗಡೆಮಾಡಿದರೆ ನಿಮಗೆ ನಿಜವಾಗಿಯೂ ಬಿಡುಗಡೆಯಾಗುವದು." (ಯೋಹಾ.8:36).

2. "ನನ್ನ ಶಿಷ್ಯರಾಗಿದ್ದು ಸತ್ಯವನ್ನು ತಿಳಿದುಕೊಳ್ಳುವಿರಿ. ಮತ್ತು ಸತ್ಯವು ನಿಮ್ಮನ್ನು ಬಿಡುಗಡೆ ಮಾಡುವದು." (ಯೋಹಾ.8:31,32).

3. "ಆ ಕರ್ತನು ದೇವರಾತ್ಮನೇ, ಕರ್ತನ ಆತ್ಮನು ಯಾರಲ್ಲಿ-ದ್ದಾನೋ ಅವರಿಗೆ ಬಿಡುಗಡೆ ಉಂಟು." (2 ಕೊರಿ.3:17).

4. "ಸಮೀಪಿಸಿ ನನ್ನ ಪ್ರಾಣವನ್ನು ವಿಮೋಚಿಸು, ಶತ್ರು ನಿಮಿತ್ತವಾಗಿ ನನ್ನನ್ನು ರಕ್ಷಿಸು." (ಕೀರ್ತ.69:18).

5. "ಅರಸೇ, ನಾವು ಸೇವಿಸುವ ದೇವರಿಗೆ ಚಿತ್ತವಿದ್ದರೆ ಆತನು ಧಗಧಗನೆ ಉರಿಯುವ ಆವಿಗೆಯೊಳಗಿಂದ ನಮ್ಮನ್ನು ಬಿಡಿಸ ಬಲ್ಲನು. ಹೇಗೂ ನಿನ್ನ ಕೈಯಿಂದ ನಮ್ಮನ್ನು ಬಿಡುಸುವನು." (ದಾನಿ.3:17).

6. "ಯೇಸು ಆಕೆಯನ್ನು ನೋಡಿ ಹತ್ತರಕ್ಕೆ ಕರೆದು ಆಕೆಗೆ - ಅಮ್ಮಾ, ನಿನಗೆ ರೋಗ ಬಿಡುಗಡೆಯಾಯಿತು ಎಂದು ಹೇಳಿ ಆಕೆಯ ಮೇಲೆ ತನ್ನ ಕೈಗಳನ್ನಿಟ್ಟನು." (ಲೂಕ.13:12).

7. "ಆ ಸೇವಕನ ಒಡೆಯನು ಕನಿಕರಪಟ್ಟು ಅವನನ್ನು ಬಿಡಿಸಿ ಆ ಸಾಲವನ್ನೆಲ್ಲಾ ಬಿಟ್ಟು ಬಿಟ್ಟನು." (ಮತ್ತಾ.18:27).

8. "ನೀತಿವಂತನಿಗೆ ಸಂಭವಿಸುವ ಕಷ್ಟಗಳು ಅನೇಕವಿದ್ದರೂ ಕರ್ತನು ಅವೆಲ್ಲವುಗಳಿಂದ ಅವನನ್ನು ಬಿಡಿಸುತ್ತಾನೆ." (ಕೀರ್ತ.34:19).

9. "ಕಷ್ಟಕಾಲದಲ್ಲಿ ನನಗೆ ಮೊರೆಯಿಡಿರಿ; ಬಿಡಿಸುವೆನು. ಆಗ ನನ್ನನ್ನು ಕೊಂಡಾಡುವಿರಿ." (ಕೀರ್ತ.50:15).

10. "ದೇವರು ನಮ್ಮನ್ನು ಅಂಧಕಾರದ ದೊರೆತನದಿಂದ ಬಿಡಿ
ತನ್ನ ಪ್ರಿಯ ಕುಮಾರನ ರಾಜ್ಯದೊಳಗೆ ಸೇರಿಸಿದನು."
(ಕೊಲೊ.1:13).

## 63. ಮಹಿಮಾಬಲ!

1. "...ನಿನ್ನ ಮಹಿಮೆಯನ್ನು ದೃಢಪಡಿಸಬೇಕು."
(ಅರಣ್ಯ.14:18).

2. "ನಾನು ಯೆಹೋವನಿಗೆ, ಕರ್ತನಾದ ಯೆಹೋವನೇ, ನೀನು
ನಿನ್ನ ಮಹತ್ವವನ್ನೂ ಭುಜಬಲವನ್ನೂ ನಿನ್ನ ದಾಸನಿಗೆ
ತೋರಿಸಲಾರಂಭಿಸಿದಿ." (ಧರ್ಮೋ.3:24).

3. "ಯೆಹೋವಾ, ಮಹಿಮಾ ಪ್ರತಾಪ ವೈಭವ ಪರಾಕ್ರಮ
ಪ್ರಭಾವಗಳು ನಿನ್ನವು." (1 ಪೂರ್ವ.29:11).

4. "ಪ್ರಭಾವೈಶ್ವರ್ಯಗಳು ನಿನ್ನ ಸನ್ನಿಧಿಯಿಂದ ಬರುತ್ತವೆ.
ನೀನು ಸರ್ವಾಧಿಕಾರಿಯು, ಬಲ ಪರಾಕ್ರಮಗಳು ನಿನ್ನ
ಹಸ್ತದಲ್ಲಿರುತ್ತವೆ." (1 ಪೂರ್ವ.29:12).

5. "ನನ್ನ ಬಲವೇ, ನಿನ್ನನ್ನು ಹಾಡಿಹರಸುವೆನು. ನನ್ನ ಆಶ್ರಯ
ದುರ್ಗವೂ ಕೃಪಾನಿಧಿಯೂ ದೇವರೇ." (ಕೀರ್ತ.59:17).

6. "ನಿನ್ನ ಮಂದಿರದಲ್ಲಿ ನಾನು ನಿನ್ನ ಮಹತ್ತನ್ನು
ಪ್ರಭಾವವನ್ನೂ ಕಂಡ ಪ್ರಕಾರ ಈಗಲೂ ಕಾಣಬೇಕೆಂದು
ಅಪೇಕ್ಷಿಸುತ್ತೇನೆ." (ಕೀರ್ತ.63:2).

7. ''ಆತನ ಸಾನಿಧ್ಯದಲ್ಲಿ ಮಾನ ಮಹಿಮೆಗಳೂ ಆತನ ಪವಿತ್ರಾಲಯದಲ್ಲಿ ಬಲಸೌಂದರ್ಯಗಳೂ ಇರುತ್ತವೆ.'' (ಕೀರ್ತ.96:6).

8. ''ಭೂಜನಾಂಗಗಳೇ ಬಲಪ್ರಭಾವಗಳು ಯೆಹೋವನವೇ ಯೆಹೋವನವೇ ಎಂದು ಹೇಳಿ ಆತನನ್ನು ಘನಪಡಿಸಿರಿ.'' (ಕೀರ್ತ.96:7).

9. ''ಯೆಹೋವನೇ ನಿನ್ನ ಸಮಾನನು ಯಾವನೂ ಇಲ್ಲ. ನೀನು ಮಹತ್ತಮನು, ನಿನ್ನ ನಾಮವೂ ಸಾಮರ್ಥ್ಯದಿಂದ ಕೂಡಿ ಮಹತ್ತಮವಾಗಿದೆ.'' (ಯೆರೆ.10:6).

10.''ನಾನು ನಿನ್ನಲ್ಲಿ ನನ್ನ ಶಕ್ತಿಯನ್ನು ತೋರಿಸಿ ನನ್ನ ಹೆಸರನ್ನು ಲೋಕದಲ್ಲೆಲ್ಲಾ ಪ್ರಸಿದ್ಧಿಪಡಿಸಬೇಕೆಂಬ ಉದ್ದೇಶದಿಂದಲೇ ನಿನ್ನನ್ನು ನಾಯಿಸದೆ ಉಳಿಸಿದೆನು.''(ವಿಮೋ.9:16).

## 64. ಬಾಯಿ!

1. ''ನೀನು ದೇವರ ಮನುಷ್ಯನೆಂದೂ ನಿನ್ನ ಬಾಯಿಂದ ಬಂದ ಯೆಹೋವನ ಮಾತು ಸತ್ಯವೆಂದೂ ಈಗ ನನಗೆ ಗೊತ್ತಾಯಿತು.'' (1 ಅರಸು.17:24).

2. ''ಆತನ ಬಾಯಿಂದ ಬಂದ ಮಾತುಗಳನ್ನು ಎದೆಯಲ್ಲಿ ನಿಧಿಯನ್ನಾಗಿ ಬಚ್ಚಿಟ್ಟುಕೊಂಡಿದ್ದೇನೆ.'' (ಯೋಬ.23:12).

3. "ನಿನಗೆ ವಿರೋಧವಾಗಿ ನಿಂತು ಮುಯ್ಯಿತೀರಿಸುವ ವೈರಿಗ
ಬಾಯನ್ನು ಕಟ್ಟುವದಕ್ಕೋಸ್ಕರ ನೀನು ಬಾಲಕರ ಮತ್ತು
ಮೊಲೆಕೂಸುಗಳ ಬಾಯಿಂದ ಬಲವಾದ ಸಾಕ್ಷಿವುಂಟಾಗುವಂ
ಮಾಡಿದಿ." (ಕೀರ್ತ.8:2).

4. "ನಾನು ಯೆಹೋವನನ್ನು ಎಡೆಬಿಡದೆ ಕೊಂಡಾಡುವೆನು
ಆತನ ಸ್ತೋತ್ರವು ಯಾವಾಗಲೂ ಬಾಯಲ್ಲಿ ಇರುವದು."
(ಕೀರ್ತ.34:1).

5. "ಇನ್ನು ಮುಂದೆ ಹಮ್ಮಿನಿಂದ ನುಡಿಯಬೇಡಿರಿ, ಸೊಕ್ಕಿನ
ಮಾತು ನಿಮ್ಮ ಬಾಯಿಂದ ಹೊರಡದಿರಲಿ." (1 ಸಮು.2:3).

6. "ಆತನು ನನ್ನ ಬಾಯಲ್ಲಿ ನೂತನ ಕೀರ್ತನೆಯನ್ನು ಹುಟ್ಟಿಸಿ
ದ್ದಾನೆ. ಅದು ನಮ್ಮ ದೇವರ ಸ್ತೋತ್ರವೇ." (ಕೀರ್ತ.40:3).

7. "ಯಥಾರ್ಥರು ಇದನ್ನು ನೋಡಿ ಹಿಗ್ಗುವರು; ಕೆಡುಕ
ಬಾಯಿ ಮುಚ್ಚಿ ಹೋಗುವದು." (ಕೀರ್ತ.107:42).

8. "ಸತ್ಯವಾಕ್ಯವನ್ನು ನನ್ನ ಬಾಯಿಂದ ತೆಗೆಯಬೇಡ. ನಿನ್ನ
ನ್ಯಾಯ ವಿಧಿಗಳನ್ನು ನಿರೀಕ್ಷಿಸಿಕೊಂಡಿದ್ದೇನೆ." (ಕೀರ್ತ.119:43)

9. "ಅವರ ಬಾಯಲ್ಲಿ ಯೆಹೋವನ ಸ್ತೋತ್ರವೂ ಕೈಯಲ್ಲಿ
ಇಬ್ಬಾಯಿ ಕತ್ತಿಯೂ ಇರಲಿ." (ಕೀರ್ತ.149:6).

10. "ಬಾಯ ಫಲವಾಗಿ ಮನುಷ್ಯನು ಬೇಕಾದಷ್ಟು ಸುಖವನ್ನನು
ಭವಿಸುವನು." (ಜ್ಞಾನೋ.12:14).

# 65. ವಾಗ್ದಾನಗಳು!

1. "ನೀವು ಲೋಕದಲ್ಲಿ ದುರಾಶೆಯಿಂದುಂಟಾದ ಕೆಟ್ಟತನಕ್ಕೆ ತಪ್ಪಿಸಿಕೊಂಡು ದೈವಸ್ವಭಾವದಲ್ಲಿ ಪಾಲನ್ನು ಹೊಂದುವವರಾಗಬೇಕೆಂಬ ಉದ್ದೇಶದಿಂದ ದೇವರು ತನ್ನ ಪ್ರಭಾವಗುಣಾತಿಶಯಗಳಿಂದ ಅಮೂಲ್ಯವಾಗಿಯೂ ಉತ್ಕೃಷ್ಟವಾಗಿಯೂ ಇರುವ ವಾಗ್ದಾನಗಳನ್ನು ನಮಗೆ ದಯಪಾಲಿಸಿದ್ದಾನೆ." (2 ಪೇತ್ರ.1:4).

2. "ನೀವು ಕ್ರಿಸ್ತನವರಾಗಿದ್ದರೆ ಅಬ್ರಹಾಮನ ಸಂತತಿಯವರೂ ವಾಗ್ದಾನಕ್ಕನುಸಾರವಾಗಿ ಬಾಧ್ಯರೂ ಆಗಿದ್ದೀರಿ." (ಗಲಾ.3:29).

3. "ಕಷ್ಟವನ್ನು ಸಹಿಸಿಕೊಳ್ಳುವವನು ಧನ್ಯನು. ಅವನು ಪರಿಶೋಧಿತನಾದ ಮೇಲೆ ಜೀವವೆಂಬ ಜಯಮಾಲೆಯನ್ನು ಹೊಂದುವನು." (ಯಾಕೋ.1:12).

4. "ದೇವರ ವಿಶ್ರಾಂತಿಯಲ್ಲಿ ಸೇರಬಹುದೆಂಬ ವಾಗ್ದಾನವು ಇನ್ನೂ ಇರುವಲ್ಲಿ ನಿಮ್ಮೊಳಗೆ ಯಾವನಾದರೂ ಆ ವಾಗ್ದಾನದ ಫಲವನ್ನು ಹೊಂದದೆ ತಪ್ಪುವವನಾದಾನೋ ಎಂದು ನಾವು ಭಯಪಡೋಣ." (ಇಬ್ರಿ.4:1).

5. "ದೇಹಸಾಧನೆಯು ಸ್ವಲ್ಪಮಟ್ಟಿಗೆ ಪ್ರಯೋಜನವಾಗಿದೆ. ಭಕ್ತಿಯಾದರೋ ಎಲ್ಲಾ ವಿಧಗಳಲ್ಲಿ ಪ್ರಯೋಜನವಾದದ್ದು; ಅದಕ್ಕೆ ಇಹಪರಗಳಲ್ಲಿಯೂ ಜೀವವಾಗ್ದಾನವುಂಟು."(1 ತಿಮೊ.4:8).

6. "ದೇವರು ಲೌಕೀಕ ವಿಷಯದಲ್ಲಿ ಬಡವರಾಗಿರುವವರನ್ನು ಆದುಕೊಂಡು ಅವರು ನಂಬಿಕೆಯಲ್ಲಿ ಐಶ್ವರ್ಯವಂತರಾಗಿಯೂ ತನ್ನನ್ನು ಪ್ರೀತಿಸುವವರಿಗೆ ತಾನು ವಾಗ್ದಾನಮಾಡಿದ ರಾಜ್ಯಕ್ಕೆ ಬಾಧ್ಯರಾಗಿಯೂ ಇರಬೇಕೆಂದು ನೇಮಿಸಲಿಲ್ಲವೋ." (ಯಾಕೋ.2:5).

7. "ಯೇಸುಕ್ರಿಸ್ತನ ಹೆಸರಿನ ಮೇಲೆ ದೀಕ್ಷಾಸ್ನಾನ ಮಾಡಿಸಿಕೊಳ್ಳಿರಿ. ಆಗ ನೀವು ಪವಿತ್ರಾತ್ಮದಾನವನ್ನು ಹೊಂದುವಿರಿ. ಆ ವಾಗ್ದಾನವು ನಿಮಗೂ ನಿಮ್ಮ ಮಕ್ಕಳಿಗೂ ದೂರವಾಗಿರುವವರೆಲ್ಲರಿಗೂ ಅಂತೂ ನಮ್ಮ ದೇವರಾಗಿರುವ ಕರ್ತನು ತನ್ನ ಕಡೆಗೆ ಕರೆಯುವವರೆಲ್ಲರಿಗೆ ಮಾಡೋಣವಾಗಿದೆ." (ಅ.ಕೃ.2:38-39).

8. "ದೇವರನ್ನು ಘನಪಡಿಸುವವನಾಗಿ ಆತನು ತನ್ನ ವಾಗ್ದಾನವನ್ನು ನೆರವೇರಿಸುವದಕ್ಕೆ ಸಮರ್ಥನೆಂದು ಪೂರಾ ಭರವಸವಿಟ್ಟು ದೃಢನಂಬಿಕೆಯುಳ್ಳವನಾದನು." (ರೋಮಾ.4:21).

9. "ನಿಶ್ಚಯವಾಗಿ ದೇವರ ವಾಗ್ದಾನಗಳು ಎಷ್ಟಿದ್ದರೂ ಕ್ರಿಸ್ತನಲ್ಲಿ ದೃಢವಾಗುತ್ತವೆ. ಆದಕಾರಣ ದೇವರ ಪ್ರಭಾವವು ಪ್ರಕಾಶವಾಗುವದಕ್ಕೋಸ್ಕರ ಆತನ ಮೂಲಕವಾಗಿ ನಾವು ಆಮೆನ್ ಎಂದು ಹೇಳುತ್ತೇವೆ." (2 ಕೊರಿ.1:20).

10. "ಆದರೆ ನಾವು ದೇವರ ವಾಗ್ದಾನವನ್ನು ನಂಬಿ ನೂತನಾಕಾಶಮಂಡಲವನ್ನೂ ನೂತನ ಭೂಮಂಡಲವನ್ನೂ ಎದುರು ನೋಡುತ್ತಾ ಇದ್ದೇವೆ." (2 ಪೇತ್ರ.3:13).

## 66. ವಾರ್ತೆ!

1. "ಮನುಷ್ಯರು ಆಹಾರಮಾತ್ರದಿಂದಲ್ಲ, ಯೆಹೋವನ ಬಾಯಿಂದ ಹೊರಡುವ ಪ್ರತಿಯೊಂದು ಮಾತಿನಿಂದಲೂ ಬದುಕುತ್ತಾರೆ." (ಧರ್ಮೋ.8:3).

2. "ಬಳಲಿ ಹೋದವರನ್ನು ಮಾತುಗಳಿಂದ ಸುಧಾರಿಸುವದಕ್ಕೆ ನಾನು ಬಲ್ಲವನಾಗುವಂತೆ ಯೆಹೋವನಾದ ದೇವರು ಶಿಕ್ಷಿತರ ನಾಲಿಗೆಯನ್ನು ನನಗೆ ದಯಪಾಲಿಸಿದ್ದಾನೆ." (ಯೆಶಾ.50:4).

3. "ಕರ್ತನೇ, ಯೆಹೋವನೇ, ನಿನ್ನ ಸೇವಕನಿಗೆ ಈ ಶ್ರೇಷ್ಠ ವಾಗ್ದಾನಗಳನ್ನು ಮಾಡಿದ ನೀನು ದೇವರಾಗಿರುತ್ತೀ; ನಿನ್ನ ವಾಕ್ಯವು ಸತ್ಯವಾದದ್ದು." (2ಸಮು.7:28).

4. "ಮೋಶೆ ಜನರ ಬಳಿಗೆ ಬಂದು ಯೆಹೋವನ ಎಲ್ಲಾ ಮಾತುಗಳನ್ನು ನ್ಯಾಯವಿಧಿಗಳನ್ನೂ ವಿವರಿಸಲು ಜನರೆಲ್ಲರೂ ಯೆಹೋವನ ಮಾತುಗಳನ್ನೆಲ್ಲಾ ಅನುಸರಿಸಿ ನಡೆಯುವೆವೆಂದು ಒಕ್ಕಟ್ಟಾಗಿ ಉತ್ತರ ಕೊಟ್ಟರು." (ವಿಮೋ.24:3).

5. "ಯೆಹೋವನು ಮೋಶೆಗೆ - ನೀನು ಈ ವಾಕ್ಯಗಳನ್ನು ಬರೆ. ಈ ವಾಕ್ಯಗಳ ಮೇರೆಗೆ ನಿನ್ನ ಸಂಗಡಲೂ ಇಸ್ರಾಯೇಲ್ಯರ ಸಂಗಡಲೂ ನಿಬಂಧನಮಾಡಿದ್ದೇನೆ ಎಂದು ಹೇಳಿದನು." (ವಿಮೋ.34:27).

6. "ಯೆಹೋವನ ವಚನವು ಯಥಾರ್ಥವಾದದ್ದು." (ಕೀರ್ತ.33:4).

7. "ನಿನ್ನ ವಾಕ್ಯವು ನನ್ನ ಕಾಲಿಗೆ ದೀಪವೂ ನನ್ನ ದಾರಿಗೆ ಬೆಳಕೂ ಆಗಿದೆ." (ಕೀರ್ತ.119:105).

8. "ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡಕೊಳ್ಳುವವರೇ ಧನ್ಯರು ಅಂದನು." (ಲೂಕ.11:28).

9. "ಆದಿಯಲ್ಲಿ ವಾಕ್ಯವಿತ್ತು; ಆ ವಾಕ್ಯವು ದೇವರ ಬಳಿಯಲ್ಲಿತ್ತು; ಆ ವಾಕ್ಯವು ದೇವರಾಗಿತ್ತು." (ಯೋಹಾ.1:1).

10. "ಆ ವಾಕ್ಯವೆಂಬಾತನು ನರಾವತಾರವೆತ್ತಿ ನಮ್ಮ ಮಧ್ಯದಲ್ಲಿ ವಾಸಮಾಡಿದನು." (ಯೋಹಾ.1:14).

## 67. ನನ್ನ ಬಲಗಡೆ!

1. "ನಾನು ಯೆಹೋವನನ್ನು ಯಾವಾಗಲೂ ನನ್ನೆದುರಿಗೆ ಇಟ್ಟುಕೊಂಡಿದ್ದೇನೆ. ಆತನು ನನ್ನ ಬಲಗಡೆಯಲ್ಲಿ ಇರುವದರಿಂದ ನಾನು ಎಂದಿಗೂ ಕದಲುವದಿಲ್ಲ." (ಕೀರ್ತ.16:8).

2. "ನಿನ್ನ ಸಮುಖದಲ್ಲಿ ಪರಿಪೂರ್ಣ ಸಂತೋಷವಿದೆ, ನಿನ್ನ ಬಲಗೈಯಲ್ಲಿ ಶಾಶ್ವತಭಾಗ್ಯವಿದೆ." (ಕೀರ್ತ.16:11).

3. "ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಗಳ ಕೆಳಗೆ ಹಾಕುವ ತನಕ ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು ಕರ್ತನು ನನ್ನ ಒಡೆಯನಿಗೆ ನುಡಿದನು." (ಮತ್ತಾ.22:44).

4. ''ಇನ್ನುಮೇಲೆ ಮನುಷ್ಯಕುಮಾರನು ಸರ್ವಶಕ್ತನ ಬಲಗಡೆ ಯಲ್ಲಿ ಆಸೀನನಾಗಿರುವದನ್ನೂ ಆಕಾಶದ ಮೇಘಗಳ ಮೇಲೆ ಕುಳಿತು ಬರುವದನ್ನೂ ಕಾಣುವಿರಿ ಎಂದು ನಿಮಗೆ ಹೇಳುತ್ತೇನೆ.'' (ಮತ್ತಾ.26:64).

5. ''ಯೇಸುಕ್ರಿಸ್ತನು ಮರಣವನ್ನು ಹೊಂದಿದ್ದಲ್ಲದೆ ಜೀವಿತನಾಗಿ ಎದ್ದು ದೇವರ ಬಲಗಡೆಯಲ್ಲಿದ್ದು ನಮಗೋಸ್ಕರ ಬೇಡು ವವನಾಗಿದ್ದಾನೆ.'' (ರೋಮಾ.8:34).

6. ''ಆತನು ಸತ್ತಿದ್ದ ಕ್ರಿಸ್ತನನ್ನು ಬದುಕಿಸಿ ಪರಲೋಕದೊಳಗೆ ಸಕಲ ರಾಜತ್ವ ಅಧಿಕಾರ ಮಹತ್ವ ಪ್ರಭುತ್ವಾದಿಗಳ ಮೇಲೆಯೂ ಈ ಲೋಕದಲ್ಲಿ ಮಾತ್ರವಲ್ಲದೆ ಬರುವ ಲೋಕದಲ್ಲಿ ಸಹ ಹೆಸರು ಗೊಂಡವರೆಲ್ಲರ ಮೇಲೆಯೂ ತನ್ನ ಬಲಗಡೆಯಲ್ಲಿ ಕೂಡ್ರಿಸಿ ಕೊಂಡನು.'' (ಎಫೆ.1:20,21).

7. ''ನೀವು ಕ್ರಿಸ್ತನೊಂದಿಗೆ ಎಬ್ಬಿಸಲ್ಪಟ್ಟಿರುವದರಿಂದ ಮೇಲಿನವು ಗಳನ್ನೇ ಹುಡುಕಿರಿ. ಅಲ್ಲಿ ಕ್ರಿಸ್ತನು ದೇವರ ಬಲಗಡೆಯಲ್ಲಿ ಆಸನಾರೂಢನಾಗಿದ್ದಾನೆ.'' (ಕೊಲೊ.3:1).

8. ''ಈ ಯಾಜಕನು ಪಾಪನಿವಾರಣೆಗೋಸ್ಕರ ನಿರಂತರವಾಗಿ ನಿಲ್ಲುವ ಒಂದೇ ಯಜ್ಞವನ್ನು ಸಮರ್ಪಿಸಿ ದೇವರ ಬಲಗಡೆಯಲ್ಲಿ ಕೂತುಕೊಂಡನು.'' (ಇಬ್ರಿ.10:12).

9. ''ಆತನು ಅವರಿಗೆ ನೀವು ದೋಣಿಯ ಬಲಗಡೆಯಲ್ಲಿ ಬಲೆ ಬೀಸಿದರೆ ಸಿಕ್ಕುವದು ಎಂದು ಹೇಳಿದನು. ಅವರು ಹಾಗೆ ಬೀಸಿದಾಗ

ಮೀನುಗಳು ಬಹಳ ಹೆಚ್ಚಾಗಿ ಸಿಕ್ಕಿದ್ದರಿಂದ ಬಲೆಯನ್ನು ಎಳೆಯುವುದಕ್ಕೆ ಆಗದೆ ಹೋಯಿತು.'' (ಯೋಹಾ.21:6).

10.''ಆ ನೀರು ದೇವಸ್ಥಾನದ ಬಲಗಡೆ ಕೆಳಗಿಂದ ಹೊರಟು ಯಜ್ಞವೇದಿಯ ದಕ್ಷಿಣದಲ್ಲಿ ಹರಿಯುತ್ತಿತ್ತು.'' (ಯೆಹೆ.47:1).

## 68. ವರಗಳನ್ನು ಅನುಗ್ರಹಿಸುವನು!

1. ''ಅವನಿಗೆ ದಿವ್ಯಾತ್ಮನನ್ನು ಕೊಟ್ಟು ಬೇಕಾದ ಜ್ಞಾನ ವಿದ್ಯಾ ವಿವೇಕಗಳನ್ನೂ ಸಕಲ ಶಿಲ್ಪ ಶಾಸ್ತ್ರಜ್ಞಾನವನ್ನೂ ಅನುಗ್ರಹಿಸಿದ್ದಾನೆ. ಅದಲ್ಲದೆ ಮತ್ತೊಬ್ಬರಿಗೆ ಕಲಿಸಿಕೊಡುವದಕ್ಕೆ ಸಹ ವರಗಳನ್ನು ಕೊಟ್ಟಿದ್ದಾನೆ.'' (ವಿಮೋ.35:33).

2. ''ದೇವರ ವರವನ್ನು ಹಣಕ್ಕೆ ಕೊಂಡುಕೊಳ್ಳಬಹುದೆಂದು ಭಾವಿಸುತ್ತೀಯೋ.'' (ಅಪೊ.8:20).

3. ''ನಮ್ಮ ಹಾಗೆಯೇ ಪವಿತ್ರಾತ್ಮವರವನ್ನು ಹೊಂದಿದ ಇವರಿಗೆ ನೀರಿನ ದೀಕ್ಷಾಸ್ನಾನವಾಗದಂತೆ ಯಾರಾದರೂ ಅಭ್ಯಂತರ ಮಾಡಾರೇ ಎಂದು ಹೇಳಿ ಅವರಿಗೆ - ನೀವು ಯೇಸುಕ್ರಿಸ್ತನ ಹೆಸರಿನಲ್ಲಿ ದೀಕ್ಷಾಸ್ನಾನ ಮಾಡಿಸಿಕೊಳ್ಳಬೇಕೆಂದು ಅಪ್ಪಣೆಕೊಟ್ಟನು.'' (ಅಪೊ.10:47).

4. ''ಕ್ರಿಸ್ತನೆಂಬ ಈ ಒಬ್ಬ ಪುರುಷನ ಕೃಪೆಯಿಂದ ಸಿಕ್ಕುವ ವರವೂ ಎಲ್ಲಾ ಮನುಷ್ಯರಿಗೆ ಹೇರಳವಾಗಿ ಸಿದ್ಧವಾಗಿರುವದು.'' (ರೋಮಾ.5:15)

5. “ಪಾಪವು ಕೊಡುವ ಸಂಬಳ ಮರಣ. ದೇವರ ಉಚಿತಾರ್ಥ ವರವು ನಮ್ಮ ಕರ್ತನಾದ ಕ್ರಿಸ್ತಯೇಸುವಿನಲ್ಲಿರುವ ನಿತ್ಯಜೀವ.” (ರೋಮಾ.6:23).

6. “ದೇವರು ವರಗಳನ್ನು ಅನುಗ್ರಹಿಸಿದ್ದಕ್ಕೂ ಜನರನ್ನು ಕರೆದದ್ದಕ್ಕೂ ಪಶ್ಚಾತ್ತಾಪಪಡುವವನಲ್ಲ.” (ರೋಮಾ.11:29).

7. “ನೀವು ಯಾವ ಕೃಪಾವರದಲ್ಲಿಯೂ ಕೊರತೆಯಿಲ್ಲದವರಾಗಿ ನಮ್ಮ ಕರ್ತನಾದ ಯೇಸುಕ್ರಿಸ್ತನ ಪ್ರತ್ಯಕ್ಷತೆಯನ್ನು ಎದುರುನೋಡುತ್ತಾ ಇದ್ದೀರಿ.” (1 ಕೊರಿ.1:7).

8. “ಪ್ರತಿಯೊಬ್ಬನಲ್ಲಿ ತೋರಿಬರುವ ದೇವರಾತ್ಮನ ವರಗಳು ಸರ್ವರ ಪ್ರಯೋಜನಾರ್ಥವಾಗಿ ಕೊಡಲ್ಪಟ್ಟಿವೆ.” (1 ಕೊರಿ.12:7).

9. “ಕ್ರಿಸ್ತನು ನಮ್ಮಲ್ಲಿ ಒಬ್ಬೊಬ್ಬನಿಗೆ ಅನುಗ್ರಹಿಸಿದ ಪ್ರಕಾರವೇ ಅವನವನಿಗೆ ಕೃಪಾವರವು ದೊರಕಿದೆ.” (ಎಫೆ.4:7).

10. “ನೀವೆಲ್ಲರೂ ದೇವರ ವಿವಿಧ ಕೃಪೆಯ ವಿಷಯದಲ್ಲಿ ಒಳ್ಳೆಯ ಮನೆವಾರ್ತೆಯವರಾಗಿದ್ದು ಪ್ರತಿಯೊಬ್ಬನು ತಾನು ಹೊಂದಿದ ಕೃಪಾವರಗಳನ್ನು ಎಲ್ಲರ ಸೇವೆಯಲ್ಲಿ ಉಪಯೋಗಿಸಲಿ.” (1 ಪೇತ್ರ.4:10).

## 69. ಪ್ರಸನ್ನಮುಖದ ಆಶೀರ್ವಾದ!

1. “ಯೆಹೋವನು ಪ್ರಸನ್ನ ಮುಖದಿಂದ ನಿಮ್ಮನ್ನು ನೋಡಿ ನಿಮ್ಮ ಮೇಲೆ ದಯವಿಡಲಿ. ಯೆಹೋವನು ನಿಮ್ಮ ಮೇಲೆ ಕೃಪಾಕಟಾಕ್ಷವಿಟ್ಟು ಶಾಂತಿಯನ್ನು ಅನುಗ್ರಹಿಸಲಿ.” (ಅರಣ್ಯ.6:25,26).

2. ''ನಮಗೆ ಒಳ್ಳೆಯದನ್ನು ಮಾಡುವವರು ಯಾರಿದ್ದಾರೆಂದು ಅನೇಕರು ಹೇಳಿಕೊಳ್ಳುತ್ತಾರೆ. ಯೆಹೋವನೇ, ನೀನು ಪ್ರಸನ್ನ ಮುಖದಿಂದ ನಮ್ಮನ್ನು ನೋಡಬೇಕು.'' (ಕೀರ್ತ.4:6).

3. ''ನಿನ್ನ ಸೇವಕನನ್ನು ಪ್ರಸನ್ನ ಮುಖದಿಂದ ನೋಡು. ಪ್ರೀತಿಯಿಂದ ನನ್ನನ್ನು ರಕ್ಷಿಸು.'' (ಕೀರ್ತ.31:16).

4. ''ದೇವರೇ, ನಮ್ಮನ್ನು ಕಟಾಕ್ಷಿಸಿ ಆಶೀರ್ವದಿಸು ಪ್ರಸನ್ನ ಮುಖದಿಂದ ನಮ್ಮನ್ನು ನೋಡು.'' (ಕೀರ್ತ.67:1).

5. ''ದೇವರೇ, ನಮ್ಮನ್ನು ತಿರಿಗಿ ಉನ್ನತಸ್ಥಿತಿಗೇರಿಸು. ಪ್ರಸನ್ನಮುಖದಿಂದ ನೋಡು, ಆಗ ಉದ್ಧಾರವಾಗುವೆವು.'' (ಕೀರ್ತ.80:19).

6. ''ನಿನ್ನ ದಾಸನಮೇಲೆ ನಿನ್ನ ಮುಖ ಪ್ರಸನ್ನತೆಯಿರಲಿ. ನಿನ್ನ ನಿಬಂಧನೆಗಳನ್ನು ನನಗೆ ಕಲಿಸು.'' (ಕೀರ್ತ.119:135).

7. ''ನಾನಾದರೋ ನಿರಪರಾಧಿಯು; ನಿನ್ನ ಸಾನಿಧ್ಯವನ್ನು ಸೇರುವೆನು. ಎಚ್ಚೆತ್ತಾಗ ನಿನ್ನ ಸ್ವರೂಪದರ್ಶನದಿಂದ ತೃಪ್ತನಾಗಿರುವೆನು.'' (ಕೀರ್ತ.17:15).

8. ''ನಾವು ಭಕ್ತಿಹೀನತೆಯನ್ನೂ ಲೋಕದ ಆಶೆಗಳನ್ನೂ ವಿಸರ್ಜಿಸಿ. ಭಾಗ್ಯಕರವಾದ ನಿರೀಕ್ಷೆಯನ್ನು ಅಂದರೆ ಮಹಾದೇವರ ಮತ್ತು ನಮ್ಮ ರಕ್ಷಕನಾದ ಯೇಸುಕ್ರಿಸ್ತನ ಪ್ರಭಾವದ ಪ್ರತ್ಯಕ್ಷತೆಯನ್ನು ಎದುರುನೋಡುತ್ತಾ ಇಹಲೋಕದಲ್ಲಿ ಸ್ವಸ್ಥಚಿತ್ತರಾಗಿಯೂ ನೀತಿವಂತರಾಗಿಯೂ ಭಕ್ತಿಯುಳ್ಳವರಾಗಿಯೂ ಬದುಕಬೇಕೆಂದು ಅದು ನಮಗೆ ಬೋಧಿಸುತ್ತದೆ.'' (ತೀತ.2:13).

9. "ನಾವೆಲ್ಲರೂ ಮುಸುಕು ತೆಗೆದಿರುವ ಮುಖದಿಂದ ಕರ್ತನ ಪ್ರಭಾವವನ್ನು ದರ್ಪಣದಲ್ಲಿ ಕಾಣಿಸುತ್ತದೋ ಎಂಬಂತೆ ದೃಷ್ಟಿಸುವವರಾಗಿದ್ದು ಪ್ರಭಾವದಿಂದ ಅಧಿಕಪ್ರಭಾವಕ್ಕೆ ಹೋಗುತ್ತಾ ಆ ಪ್ರಭಾವದ ಸಾರೂಪ್ಯವುಳ್ಳವರೇ ಆಗುತ್ತೇವೆ." (2 ಕೊರಿ.3:18).

10. "ಕತ್ತಲೆಯೊಳಗಿಂದ ಬೆಳಕು ಹೊಳೆಯಲಿ ಎಂದು ಹೇಳಿದ ದೇವರು ತಾನೇ ಯೇಸುಕ್ರಿಸ್ತನ ಮುಖದಲ್ಲಿ ತೋರುವ ದೇವ ಪ್ರಭಾವ ಜ್ಞಾನವೆಂಬ ಪ್ರಕಾಶವು ಅನೇಕರಿಗೆ ಉಂಟಾಗುವದಕ್ಕಾಗಿ ನಮ್ಮ ಹೃದಯದಲ್ಲಿ ಹೊಳೆದನು." (2 ಕೊರಿ.4:6).

## 70. ಉನ್ನತಸ್ಥಿತಿಗೆ ತರುವಾತನು!

1. "ನೀವು ನಿಮ್ಮ ದೇವರಾದ ಯೆಹೋವನ ಮಾತನ್ನು ಶ್ರದ್ಧೆಯಿಂದ ಕೇಳಿ ನಾನು ಈಗ ನಿಮಗೆ ಬೋಧಿಸುವ ಆತನ ಆಜ್ಞೆಗಳನ್ನು ಅನುಸರಿಸಿ ನಡೆದರೆ ಆತನು ಭೂಮಿಯ ಮೇಲಿರುವ ಎಲ್ಲಾ ಜನಾಂಗಗಳಿಗಿಂತಲೂ ನಿಮ್ಮನ್ನು ಉನ್ನತಸ್ಥಿತಿಗೆ ತರುವನು." (ಧರ್ಮೋ.28:1).

2. "ನೀವೋ ಯೆಹೋವನ ಯಾಜಕರೆಂಬ ಬಿರುದನ್ನು ಹೊಂದುವಿರಿ. ಜನರು ನಿಮ್ಮನ್ನು ನಮ್ಮ ದೇವರ ಸೇವಕರು ಎಂದು ಕರೆಯುವರು." (ಯೆಶಾ.61:6).

3. "ನಿನಗೆ ಗೊತ್ತಿಲ್ಲದ ಜನಾಂಗವನ್ನು ನಿನ್ನ ಅಧೀನಕ್ಕೆ ಕರೆಯುವಿ. ಇಸ್ರಾಯೇಲಿನ ಸದಮಲ ಸ್ವಾಮಿ ಎನಿಸಿಕೊಳ್ಳುವ ನಿನ್ನ

ದೇವರಾದ ಯೆಹೋವನು ನಿನಗೆ ವೈಭವಕೊಟ್ಟಿರುವದನ್ನು ನೋಡಿ ನಿನ್ನನ್ನು ತಿಳಿಯದ ಜನಾಂಗವು ನಿನ್ನ ಆಶ್ರಯಕ್ಕೆ ಓಡಿಬರುವದು." (ಯೆಶಾ.55:5).

4. "ಜನರ ಕಲಹಗಳಿಗೆ ನನ್ನನ್ನು ತಪ್ಪಿಸಿ, ಜನಾಂಗಗಳಿಗೆ ದೊರೆಯಾಗುವಂತೆ ಮಾಡಿದ್ದೀ. ನಾನರಿಯದ ಜನಾಂಗದವರು ಸಹ ನನಗೆ ಅಧೀನರಾಗುವರು." (ಕೀರ್ತ.18:43).

5. "ಬಳಿಕ ರಾಜನು ಶಾದ್ರಕ್ ಮೇಶಕ್ ಅಬೆದ್ನೆಗೋ ಎಂಬವರನ್ನು ಬಾಬೆಲ್ ಸಂಸ್ಥಾನದಲ್ಲಿ ಉನ್ನತ ಪದವಿಗೆ ತಂದನು." (ದಾನಿ.3:30).

6. "ನಾನು ಈ ಜನರಿಗೆ ಅನುಗ್ರಹಿಸುವ ಎಲ್ಲಾ ಮೇಲುಗಳ ಸುದ್ದಿಯನ್ನು ಕೇಳಿ ನಾನು ಈ ಪಟ್ಟಣಕ್ಕೆ ಉಂಟುಮಾಡುವ ಸುಖಸಮಾಧಾನಗಳನ್ನು ನೋಡಿ ಹೆದರಿ ನಡುಗುವ ಸಕಲ ಭೂರಾಜ್ಯಗಳ ಮುಂದೆ ಈ ಪಟ್ಟಣವು ನನ್ನ ಕೀರ್ತಿಯೂ ಮಹಿಮೆಯೂ ಆನಂದದ ಬಿರುದೂ ಆಗುವದು." (ಯೆರೆ.33:9).

7. "ಹೀಗಿರುವದರಿಂದ ದೇವರ ತ್ರಾಣವುಳ್ಳ ಹಸ್ತದ ಕೆಳಗೆ ನಿಮ್ಮನ್ನು ತಗ್ಗಿಸಿಕೊಳ್ಳಿರಿ. ಆತನು ತಕ್ಕ ಕಾಲದಲ್ಲಿ ನಿಮ್ಮನ್ನು ಮೇಲಕ್ಕೆ ತರುವನು." (1ಪೇತ್ರ.5:6).

8. "ಜೀವಕರವಾದ ನಿರೀಕ್ಷೆಯನ್ನು ನಮ್ಮಲ್ಲಿ ಹುಟ್ಟಿಸಿ ನಮ್ಮನ್ನು ಲಯ ಕಳಂಕ ಕ್ಷಯಗಳಿಲ್ಲದ ಬಾಧ್ಯತೆಯನ್ನು ಎದುರು ನೋಡುವವರನ್ನಾಗಿ ಮಾಡಿದನು. (1 ಪೇತ್ರ.1:4).

9. "ಅವನನ್ನು ತನ್ನ ಮನೆಗೆ ಯಜಮಾನನನ್ನಾಗಿಯೂ ತನ್ನ ಆಸ್ತಿಗೆಲ್ಲಾ ಅಧಿಕಾರಿಯನ್ನಾಗಿಯೂ ಮಾಡಿದನು." (ಕೀರ್ತ.105:21).

10. "ಕೆಲವರು ರಥಬಲದಲ್ಲಿ ಕೆಲವರು ಅಶ್ವಬಲದಲ್ಲಿ ಹೆಚ್ಚಳಪಡುತ್ತಾರೆ, ನಾವಾದರೋ ನಮ್ಮ ದೇವರಾದ ಯೆಹೋವನಲ್ಲಿಯೇ." (ಕೀರ್ತ.20:7).

## 71. ಮೇಘಸ್ತಂಭವಾದಾತನು!

1. "ಯೆಹೋವನು ಹಗಲು ಹೊತ್ತಿನಲ್ಲಿ ದಾರಿತೋರಿಸುವದಕ್ಕೆ ಮೇಘಸ್ತಂಭದಲ್ಲಿಯೂ, ರಾತ್ರಿಯಲ್ಲಿ ಬೆಳಕುಕೊಡುವದಕ್ಕೆ ಅಗ್ನಿಸ್ತಂಭದಲ್ಲಿಯೂ ಇದ್ದು ಅವರ ಮುಂಭಾಗದಲ್ಲಿ ಹೋದನು. (ವಿಮೋ.13:21).

2. "ದೇವರ ಪ್ರತಾಪವನ್ನು ಕೊಂಡಾಡಿರಿ. ಆತನ ಗಾಂಭೀರ್ಯವು ಇಸ್ರಾಯೇಲ್ಯರ ಆಶ್ರಯವಾಗಿದೆ." (ಕೀರ್ತ.68:34).

3. "ಯೆಹೋವನೇ, ನಿನ್ನ ಪ್ರೀತಿಯು ಆಕಾಶದಷ್ಟು ಉನ್ನತವಾಗಿದೆ. ನಿನ್ನ ನಂಬಿಗಸ್ತಿಕೆಯು ಮೇಘಮಾರ್ಗವನ್ನು ಮುಟ್ಟುತ್ತದೆ." (ಕೀರ್ತ.36:5).

4. "ಆಗ ಮೇಘವು ದೇವದರ್ಶನ ಗುಡಾರವನ್ನು ಮುಚ್ಚಿತು. ಯೆಹೋವನ ತೇಜಸ್ಸು ಗುಡಾರವನ್ನು ತುಂಬಿತು." (ವಿಮೋ.40:34).

5. ''ಆ ಮೇಘವು ಗುಡಾರದಿಂದ ಮೇಲಕ್ಕೆ ಎದ್ದಾಗ ಇಸ್ರಾಯೇಲ್ಯರು ಮುಂದಕ್ಕೆ ಪ್ರಯಾಣಮಾಡುವರು.'' (ಅರಣ್ಯ.9:17).

6. ''ಇಗೋ, ನಾನು ನೋಡಿದೆನು. ಬಡಗಲಿಂದ ಬಿರುಗಾಳಿಯು ಬೀಸಿತು. ಎಡೆಬಿಡದೆ ಝಗಝಗಿಸುವ ಜ್ವಾಲೆಯುಳ್ಳ ಮಹಾಮೇಘವು ಕಾಣಿಸಿತು.'' (ಯೆಹೆ.1:4).

7. ''ಅಷ್ಟರಲ್ಲಿ ಮೋಡವು ಬಂದು ಅದರ ಮೇಲೆ ಕವಿಯಿತು. ಆ ಮೋಡದೊಳಗಿಂದ - ಈತನು ಪ್ರಿಯನಾಗಿರುವ ನನ್ನ ಮಗನು; ಈತನ ಮಾತನ್ನು ಕೇಳಿರಿ ಎಂದು ಆಕಾಶವಾಣಿ ಆಯಿತು.'' (ಮಾರ್ಕ.9:7).

8. ''ಆಗ ಮನುಷ್ಯಕುಮಾರನು ಬಹು ಬಲದಿಂದಲೂ ಮಹಿಮೆಯಿಂದಲೂ ಮೇಘಗಳಲ್ಲಿ ಬರುವದನ್ನು ಕಾಣುವರು.'' (ಮಾರ್ಕ.13:26).

9. ''ಯೆಹೋವನು ಬಿರುಗಾಳಿಯಲ್ಲಿಯೂ ತುಫಾನಿನಲ್ಲಿಯೂ ನಡೆಯುತ್ತಾನೆ. ಮೋಡಗಳು ಆತನ ಹೆಜ್ಜೆಯಿಂದೇಳುವ ಧೂಳು.'' (ನಹೂಮ.1:3).

10. ''ಇಗೋ, ಮೇಘಗಳೊಂದಿಗೆ ಬರುತ್ತಾನೆ. ಎಲ್ಲರ ಕಣ್ಣುಗಳು ಆತನನ್ನು ಕಾಣುವವು, ಆತನನ್ನು ಇರಿದವರು ಸಹ ಕಾಣುವರು.'' (ಪ್ರಕ.1:7).

# 72. ಮುಂದುಗಡೆ ಹೋಗುವಾತನು!

1. "ಯೆಹೋವನು ತಾನೇ ನಿನ್ನ ಮುಂದುಗಡೆ ಹೋಗುವನು. ತಾನೇ ನಿನ್ನ ಸಂಗಡ ಇರುವನು." (ಧರ್ಮೋ.31:8).

2. "ಯೆಹೋವನು ನಿಮಗೆ ಮುಂಬಲವಾಗಿ ಮುಂದರಿಯು ವನು. ಇಸ್ರಾಯೇಲಿನ ದೇವರು ನಿಮಗೆ ಹಿಂಬಲವಾಗಿಯೂ ಇರುವನು." (ಯೆಶಾ.52:12).

3. "ಅವರ ಅರಸನು ಅವರ ಮುಂದೆ ತೆರಳಿದ್ದಾನೆ. ಯೆಹೋವನು ಅವರ ಮುಂಭಾಗದಲ್ಲಿ ನಡೆಯುತ್ತಿದ್ದಾನೆ." (ಮೀಕ.2:13).

4. "ಅಲ್ಲಿ ಹೋರೇಬಿನಲ್ಲಿರುವ ಬಂಡೆಯ ಮೇಲೆ ನಾನೇ ನಿನ್ನೆದುರಾಗಿ ನಿಲ್ಲುವೆನು. ನೀನು ಆ ಬಂಡೆಯನ್ನು ಹೊಡೆದಾಗ ಅದರಿಂದ ನೀರು ಹೊರಡುವದು." (ವಿಮೋ.17:6).

5. "ನಾನು ಯೆಹೋವನನ್ನು ಯಾವಾಗಲೂ ನನ್ನೆದುರಿಗೇ ಇಟ್ಟುಕೊಂಡಿದ್ದೇನೆ." (ಕೀರ್ತ.16:8).

6. "ನನ್ನ ವಾಕ್ಯವನ್ನು ಕಾಪಾಡಿದ್ದರಿಂದ ಇಗೋ ನಿನ್ನೆದುರಿನಲ್ಲಿ ಒಂದು ಬಾಗಿಲನ್ನು ತೆರೆದಿಟ್ಟಿದ್ದೇನೆ." (ಪ್ರಕ.3:8).

7. "ಇಗೋ, ದಾರಿಯಲ್ಲಿ ನಿಮ್ಮನ್ನು ಕಾಪಾಡುವಕ್ಕೂ ನಾನು ಗೊತ್ತು ಮಾಡಿರುವ ಸ್ಥಳಕ್ಕೆ ಕರತರುವದಕ್ಕೂ ದೂತನನ್ನು ನಿಮ್ಮ ಮುಂದುಗಡೆ ಕಳುಹಿಸುತ್ತೇನೆ." (ವಿಮೋ.23:20).

8. "ನನ್ನ ಪ್ರಭಾವವು ನಿನ್ನೆದುರಾಗಿ ದಾಟಿಹೋಗುವ ಕಾಲದಲ್ಲಿ ನಾನು ಈ ಬಂಡೆಯ ಸಂಧಿಯಲ್ಲಿ ನಿನ್ನನ್ನು ಇರಿಸಿ ನಿನ್ನ ಮುಂದೆ ದಾಟಿಹೋಗುವ ತನಕ ನಿನ್ನ ಮೇಲೆ ಕೈಮುಚ್ಚುವೆನು." (ವಿಮೋ.33:22).

9. "ನನ್ನ ದೂತನು ನಿಮ್ಮ ಮುಂದೆ ಮುಂದೆ ನಡೆದು ಅಮೋರಿಯರೂ ಹಿತ್ತಿಯರೂ ಪೆರಿಜೀಯರೂ ಕಾನಾನ್ಯರೂ ಹಿವ್ವಿಯರೂ ಯೆಬೂಸಿಯರೂ ಇರುವ ದೇಶಕ್ಕೆ ನಿಮ್ಮನ್ನು ಸೇರಿಸುವೆನು." (ವಿಮೋ.23:23).

10. "ಆತನು ತನ್ನ ಸರ್ವೋತ್ತಮತ್ವವನ್ನು ನಿನ್ನೆದುರಾಗಿ ದಾಟಿಹೋಗುವಂತೆ ಮಾಡುವೆನು, ಯೆಹೋವನ ನಾಮ ಮಹತ್ವವನ್ನು ನಿನ್ನೆದುರಾಗಿ ಪ್ರಕಟಿಸುವೆನು." (ವಿಮೋ.33:18).

## 73. ಸಮಾಪ್ತಿಯವರೆಗೆ!

1. "ನೋಡಿರಿ, ನಾನು ಯುಗದ ಸಮಾಪ್ತಿಯ ವರೆಗೂ ಎಲ್ಲಾ ದಿವಸ ನಿಮ್ಮ ಸಂಗಡ ಇರುತ್ತೇನೆ." (ಮತ್ತಾ.28:20).

2. "ಈ ಲೋಕವನ್ನು ಬಿಟ್ಟು ತಂದೆಯ ಬಳಿಗೆ ಹೋಗಬೇಕಾದ ಕಾಲ ಬಂತೆಂದು ತಿಳುಕೊಂಡು ಲೋಕದಲ್ಲಿರುವ ತನ್ನನ್ನು ಪ್ರೀತಿಸಿ ಪರಿಪೂರ್ಣವಾಗಿ ಅವರನ್ನು ಪ್ರೀತಿಸುತ್ತಾ ಬಂದನು." (ಯೋಹಾ.13:1).

3. "ಆದಿಗಿಂತ ಅಂತ್ಯವು ಲೇಸು. ಹಮ್ಮುಗಾರನಿಗಿಂತ ತಾಳ್ಮೆಯುಳ್ಳವನು ಉತ್ತಮ." (ಪ್ರಸಂಗಿ.7:8).

4. "ಯೇಸು ಕ್ರಿಸ್ತನಿಗೆ ಅಧಿಪತ್ಯವೂ ಘನವೂ ಯುಗಯುಗಾಂತರ ಗಳಲ್ಲಿಯೂ ಇರುವವು ಆಮೆನ್." (1 ಪೇತ್ರ.4:11).

5. "ಎಲ್ಲಾ ದೊರೆತನವನ್ನೂ ಎಲ್ಲಾ ಅಧಿಕಾರವನ್ನೂ ಬಲವನ್ನೂ ನಿವೃತ್ತಿಮಾಡಿ ತಂದೆಯಾಗಿರುವ ದೇವರಿಗೆ ರಾಜ್ಯವನ್ನು ಒಪ್ಪಿಸಿಕೊಡುವಾಗ ಸಮಾಪ್ತಿ." (1 ಕೊರಿ.15:24).

6. "ನೀನು ಹೋಗಿ ಅಂತ್ಯದವರೆಗೆ ಇರು. ನೀನು ದೀರ್ಘನಿದ್ರೆಯನ್ನು ಹೊಂದಿ ಯುಗ ಸಮಾಪ್ತಿಯಲ್ಲಿ ಎದ್ದು ನಿನಗಾಗುವ ಸ್ವಾಸ್ತ್ಯದೊಳಗೆ ನಿಲ್ಲುವಿ ಎಂದು ಹೇಳಿದನು." (ದಾನಿ.12:13).

7. "ಜ್ಞಾನಿಗಳು ತೇಜೋಮಯವಾದ ಆಕಾಶಮಂಡಲದಂತೆ ಪ್ರಕಾಶಿಸುವರು; ಬಹು ಜನರನ್ನು ಸದ್ಧರ್ಮಿಗಳನ್ನಾಗಿ ಮಾಡುವವರು. ಯುಗಯುಗಾಂತರಗಳಲ್ಲಿಯೂ ನಕ್ಷತ್ರಗಳ ಹಾಗೆ ಹೊಳೆಯುವರು." (ದಾನಿ.12:3).

8. "ಹೊಲವಂದರೆ ಈ ಲೋಕ, ಒಳ್ಳೆಯ ಬೀಜವೆಂದರೆ ಪರಲೋಕರಾಜ್ಯದವರು. ಹಣಜಿ ಅಂದರೆ ಸೈತಾನನವರು. ಅದನ್ನು ಬಿತ್ತುವ ವೈರಿ ಅಂದರೆ ಸೈತಾನನು. ಸುಗ್ಗೀಕಾಲ ಅಂದರೆ ಯುಗದ ಸಮಾಪ್ತಿ." (ಮತ್ತಾ.13:38,39).

9. "ಪರಲೋಕರಾಜ್ಯದ ಈ ಸುವಾರ್ತೆಯು ಸರ್ವಲೋಕದಲ್ಲಿ ಎಲ್ಲಾ ಜನಾಂಗಗಳಿಗೆ ಸಾಕ್ಷಿಯಾಗಿ ಸಾರಲಾಗುವದು. ಆಗ ಅಂತ್ಯವು ಬರುವದು." (ಮತ್ತಾ.24:14).

10. "ಒಳ್ಳೆಯ ಮೀನುಗಳನ್ನು ಪುಟ್ಟಿಗಳಲ್ಲಿ ತುಂಬಿಕೊಂಡು ಕೆಟ್ಟ ಮೀನುಗಳನ್ನು ಬಿಸಾಟುಬಿಟ್ಟರು. ಹಾಗೆಯೇ ಯುಗದ ಸಮಾಪ್ತಿಯಲ್ಲಿ ಆಗುವದು." (ಮತ್ತಾ.13:48,49).

## 74. ಮುಂಗಾರು ಹಿಂಗಾರುಮಳೆ!

1. "ನಾನು ಮುಂಗಾರು ಹಿಂಗಾರುಮಳೆಗಳನ್ನು ಆಯಾಕಾಲದಲ್ಲಿಯೇ ಬರಮಾಡುವೆನು; ನಿಮ್ಮ ಹೊಲಗಳು ಒಳ್ಳೆಯ ಬೆಳೆಯನ್ನು ಕೊಡುವವು." (ಯಾಜಕ.26:4)

2. "ನೀವು ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗುವ ದೇಶವೋ ಹಳ್ಳದಿನ್ನೆಗಳ ದೇಶ. ಆಕಾಶದಿಂದ ಮಳೆ ಬಿದ್ದ ಪ್ರಕಾರವೇ ಅದಕ್ಕೆ ನೀರು ದೊರೆಯುವದು. ಅದು ನಿಮ್ಮ ದೇವರಾದ ಯೆಹೋವನು ಪರಾಂಬರಿಸುವ ದೇಶ." (ಧರ್ಮೋ.11:11,12)

3. "ನಿಮಗೆ ಗೋದಿ, ದ್ರಾಕ್ಷಿ ಎಣ್ಣೆಕಾಯಿ ಇವುಗಳ ಬೆಳೆ ಚೆನ್ನಾಗಿ ಉಂಟಾಗುವಂತೆ ಆತನು ನಿಮ್ಮ ಭೂಮಿಗೆ ಬೇಕಾದ ಮುಂಗಾರು ಹಿಂಗಾರುಗಳನ್ನು ಸರಿಯಾಗಿ ನಡಿಸುವನು." (ಧರ್ಮೋ.11:14)

4. "ಯೆಹೋವನು ಆಕಾಶದಲ್ಲಿರುವ ತನ್ನ ಜಲನಿಧಿಯನ್ನು ತೆರೆದು ನಿಮ್ಮ ದೇಶದ ಮೇಲೆ ಬೆಳೆಗೆ ಬೇಕಾದ ಹಾಗೆ ಮಳೆಯನ್ನು ಸುರಿಸಿ ನಿಮ್ಮ ಎಲ್ಲಾ ವ್ಯವಸಾಯವನ್ನು ಸಫಲಮಾಡುವನು." (ಧರ್ಮೋ.28:12).

5. "ನನ್ನ ಬೋಧನೆಯು ಮುಂಚಿನಂತೆಯೂ ಕಾಯಿಪಲ್ಯಗಳ ಮೇಲೆ ಬೀಳುವ ಹದಮಳೆಯಂತೆಯೂ ಹಿತಕರವಾಗಿರುವದು." (ಧರ್ಮೋ.32:2).

6. "ಮೋಡಗಳಿಲ್ಲದ ಪ್ರಾತಃಕಾಲದಲ್ಲಿ ತೇಜೋಮಯವಾಗಿ ಉದಯಿಸಿ ಮೋಡಗಳನ್ನು ಚದರಿಸಿಬಿಟ್ಟು, ಮಳೆ ಬಿದ್ದು ಭೂಮಿಯಿಂದ ಹುಲ್ಲನ್ನು ಮೊಳೆಸುವ ಸೂರ್ಯನಿಗೆ ಸಮಾನನಾಗಿದ್ದಾನೆ." (2 ಸಮು.23:4).

7. "ಹುಲ್ಲು ಕೊಯಿದ ಮೇವುಗಾಡಿನ ಮೇಲೆ ಸುರಿಯುವ ವೃಷ್ಟಿಯಂತೆಯೂ ಭೂಮಿಯನ್ನು ನೆನಸುವ ಹದಮಳೆಯಂತೆಯೂ ಅವನು ಇರಲಿ". (ಕೀರ್ತ.72:6).

8. "ಆತನು ಭೂಮಿಯ ಮೇಲೆ ಮಳೆ ಸುರಿಸಿ ಹೊಲಗದ್ದೆಗಳಿಗೆ ನೀರನ್ನು ಒದಗಿಸುತ್ತಾನೆ." (ಯೋಬ.5:10).

9. "ನೀರಿನ ಹನಿಗಳನ್ನು ಎಳೆದುಕೊಳ್ಳುವನು. ಅವು ತಿಳಿಮಳೆಯಾಗಿ ಆತನ ಮಂಜಿನಿಂದ ಉದುರುವವು." (ಯೋಬ.36:27).

10. "ಆತನು ಹಿಮಕ್ಕೂ ಹದಮಳೆಗೂ ತನ್ನ ಶಕ್ತಿಯ ದೊಡ್ಡ ಮಳೆಗೂ ಭೂಮಿಯ ಮೇಲೆ ಬೀಳು ಎಂದು ಅಪ್ಪಣೆ ಮಾಡುವನು." (ಯೋಬ.37:6).

## 75. ಕರ್ತನ ಭುಜಬಲ!

1. "ಆದಿಯಿಂದಲೂ ದೇವರೇ, ನಿಮಗೆ ನಿವಾಸ ಸ್ಥಾನವಾಗಿದ್ದೀರಲ್ಲಾ, ಸದಾದೇವರ ಹಸ್ತವೇ ನಿಮಗೆ ಆಧಾರ." (ಧರ್ಮೋ.33:27).

2. "ನಿನ್ನ ಭುಜಬಲ, ಹಸ್ತ, ಪ್ರಸನ್ನತೆ ಇವೇ ಅವರಿಗೆ ಜಯವನ್ನುಂಟು ಮಾಡಿದವು." (ಕೀರ್ತ.44:3).

3. "ರಹಬನ್ನು ಭೇದಿಸಿ ಸಾಯಿಸಿದವನು ನೀನು. ನಿನ್ನ ಭುಜಬಲದಿಂದ ಶತ್ರುಗಳನ್ನು ಚದರಿಸಿಬಿಟ್ಟೆ." (ಕೀರ್ತ.89:10).

4. "ಆತನ ಬಲಗೈಯೂ ಪರಿಶುದ್ಧ ಬಾಹುವೂ ಜಯವನ್ನು ಉಂಟುಮಾಡಿದೆ." (ಕೀರ್ತ.98:1).

5. "ಆಹಾ, ಯೆಹೋವನಾದ ದೇವರು ಶೂರನಾಗಿಬರುವನು. ತನ್ನ ಭುಜಬಲದಿಂದಲೇ ಆಳುವನು. ಇಗೋ, ಆತನ ಕ್ರಿಯಾ ಲಾಭವು ಆತನೊಂದಿಗಿದೆ." (ಯೆಶಾ.40:10).

6. "ಯೆಹೋವನು ಸಕಲ ಜನಾಂಗಗಳ ಕಣ್ಣೆದುರಿನಲ್ಲಿ ತನ್ನ ದಿವ್ಯ ಬಾಹುವನ್ನು ತೆರೆದು ತೋರಿಸಿದ್ದಾನೆ; ಭೂಮಿಯ ಎಲ್ಲಾ ದಿಕ್ಕಿನವರೂ ನಮ್ಮ ದೇವರ ರಕ್ಷಣಾಕಾರ್ಯವನ್ನು ನೋಡುವರು." (ಯೆಶಾ.52:10).

7. "ಯೆಹೋವನ ಭುಜವೇ, ಎಚ್ಚರಗೊಳ್ಳು, ಎಚ್ಚರಗೊಳ್ಳು, ಬಲವನ್ನು ತಂದುಕೋ, ಪೂರ್ವಕಾಲದಲ್ಲಿ ಪುರಾತನದ ತಲಾಂತರಗಳಲ್ಲಿ ಎಚ್ಚರಪಟ್ಟಂತೆ ಈಗಲೂ ಎಚ್ಚೆತ್ತುಕೋ." (ಯೆಶಾ.51:9).

8. "ನಾನೇ ಕೈ ನೀಡಿ ನನ್ನ ಮಹಾ ಶಕ್ತಿಯಿಂದ ಲೋಕವನ್ನೂ, ಭೂಮಿಯ ಮೇಲಣ ಮಾನವರನ್ನೂ, ಪಶುಗಳನ್ನೂ ಸೃಷ್ಟಿಸಿದ್ದೇನೆ." (ಯೆರೆ.27:5).

9. "ನಾವು ಕೇಳಿದ ಸಂಗತಿಯನ್ನು ನಮ್ಮಲ್ಲಿ ಯಾರು ನಂಬಿದ್ದರು? ಯೆಹೋವನ ಬಾಹುವು ಯಾರಿಗೆ ಗೋಚರವಾಗಿತ್ತು" (ಯೆಶಾ.53:1).

10. "ಯೆಹೋವನು ತನ್ನ ಬಲಗೈ ಮೇಲೆ, ತನ್ನ ಭುಜಬಲದ ಮೇಲೆ ಆಣೆಯಿಟ್ಟು - ನಿನ್ನ ದವಸವನ್ನು ನಿನ್ನ ಶತ್ರುಗಳ ಆಹಾರಕ್ಕೆ ಇನ್ನು ಕೊಡಲೇ ಕೊಡೆನು, ಎಂದು ಹೇಳಿದ್ದಾನೆ." (ಯೆಶಾ.62:8).

## 76. ಕ್ಷಮಿಸುವಾತನು!- ಭಾಗ 1

1. "ನಾನು ಅವರ ದುಷ್ಕೃತ್ಯಗಳ ವಿಷಯವಾಗಿ ಕ್ಷಮೆಯುಳ್ಳವನಾಗಿರುವೆನು. ಅವರ ಪಾಪವನ್ನು ನನ್ನ ನೆನಪಿಗೆ ಎಂದಿಗೂ ತರುವದಿಲ್ಲ." (ಇಬ್ರಿ.8:12).

2. "ನಂಬಿಕೆಯಿಂದ ಮಾಡಿದ ಪ್ರಾರ್ಥನೆಯು ರೋಗಿಯನ್ನು ರಕ್ಷಿಸುವದು; ಕರ್ತನು ಅವನನ್ನು ಎಬ್ಬಿಸುವನು ಮತ್ತು ಪಾಪ ಮಾಡಿದವನಾಗಿದ್ದರೆ ಅದು ಪರಿಹಾರವಾಗುವದು." (ಯಾಕೊ.5:15).

3. "ನಮ್ಮ ಪಾಪಗಳನ್ನು ಒಪ್ಪಿಕೊಂಡು ಅರಿಕೆ ಮಾಡಿದರೆ ಆತನು ನಂಬಿಗಸ್ತನೂ ನೀತಿವಂತನೂ ಆಗಿರುವದರಿಂದ ನಮ್ಮ ಪಾಪಗಳನ್ನು ಕ್ಷಮಿಸಿಬಿಟ್ಟು, ಸಕಲ ಅನೀತಿಯನ್ನು ಪರಿಹರಿಸಿ ನಮ್ಮನ್ನು ಶುದ್ಧಿ ಮಾಡುವನು." (1 ಯೋಹಾ.1:9).

4. "ಧರ್ಮಶಾಸ್ತ್ರದ ಪ್ರಕಾರ ಸ್ವಲ್ಪ ಕಡಿಮೆ ಎಲ್ಲಾ ವಸ್ತುಗಳು ರಕ್ತದಿಂದಲೇ ಶುದ್ಧೀಕರಿಸಲ್ಪಡುವವು. ರಕ್ತಧಾರೆಯಿಲ್ಲದೆ ಪಾಪಪರಿಹಾರವಿಲ್ಲ." (ಇಬ್ರಿ.9:22).

5. ''ಆಗ ಯೇಸು -''ತಂದೆಯೇ, ಅವರಿಗೆ ಕ್ಷಮಿಸು, ತಾವು ಏನು ಮಾಡುತ್ತೇವೆಂಬದನ್ನು ಅರಿಯರು ಅಂದನು.'' (ಲೂಕ.23:34).

6. ''ಸಾವಿರಾರು ತಲೆಗಳವರೆಗೂ ದಯೆ ತೋರಿಸುವನು. ದೋಷಾಪರಾಧ ಪಾಪಗಳನ್ನು ಕ್ಷಮಿಸುವವನು.'' (ವಿಮೋ.34:7).

7. ''ನಾನಾಗಲಿ ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರಾಗಲಿ ಈ ಸ್ಥಳದ ಕಡೆಗೆ ತಿರುಗಿಕೊಂಡು ನಿನ್ನನ್ನು ಪ್ರಾರ್ಥಿಸುವಾಗ ನಿನ್ನ ನಿವಾಸವಾಗಿರುವ ಪರಲೋಕದಿಂದ ನಮ್ಮ ಬಿನ್ನಹವನ್ನು ಕೇಳಿ ಕ್ಷಮೆಯನ್ನು ಅನುಗ್ರಹಿಸು.'' (2 ಪೂರ್ವ.6:21).

8. ''ಯಾವನ ದ್ರೋಹವು ಪರಿಹಾರವಾಗಿದೆಯೋ ಯಾವನ ಪಾಪವು ಕ್ಷಮಿಸಲ್ಪಟ್ಟಿದೆಯೋ ಅವನೇ ಧನ್ಯನು.'' (ಕೀರ್ತ.32:1).

9. ''ನನ್ನ ಪಾಪವನ್ನು ಮರೆಮಾಡದೆ ನಿನಗೆ ನನ್ನ ದೋಷವನ್ನು ತಿಳಿಸಿದೆನು. ನೀನು ನನ್ನ ಅಪರಾಧ ಪಾಪಗಳನ್ನು ಪರಿಹರಿಸಿಬಿಟ್ಟೆ.'' (ಕೀರ್ತ.32:5).

10.''ಯೆಹೋವನೇ ನೀನು ಒಳ್ಳೆಯವನೂ ಕ್ಷಮಿಸುವವನೂ ನಿನಗೆ ಮೊರೆಯಿಡುವವರೆಲ್ಲರಲ್ಲಿ ಕೃಪಾಪೂರ್ಣನೂ ಆಗಿದ್ದೀಯಲ್ಲಾ.'' (ಕೀರ್ತ.86:5).

## 77 ಕ್ಷಮಿಸುವಾತನು!- ಭಾಗ 2

1. ''ಆದರೂ ಆತನು ಕರುಣಾಳುವೂ ಅಪರಾಧಿಗಳನ್ನು ಸಂಹರಿಸದೆ ಕ್ಷಮಿಸುವವನೂ ಆಗಿ ತನ್ನ ಸಿಟ್ಟನ್ನೆಲ್ಲಾ ಏರಗೊಡದೆ ಹಲವು ಸಾರಿ ತಡೆಯುತ್ತಾ ಬಂದನು.'' (ಕೀರ್ತ.78:38).

2. "ನಿನ್ನ ಪ್ರಜೆಯ ದ್ರೋಹವನ್ನು ಕ್ಷಮಿಸಿದ್ದೀ ಅವರ ಎಲ್ಲಾ ಪಾಪಗಳನ್ನು ಅಳಿಸಿಬಿಟ್ಟಿದ್ದೀ." (ಕೀರ್ತ.85:2).

3. "ಯೆಹೋವನೇ, ನೀನು ದುಷ್ಕೃತ್ಯಗಳಿಗಾಗಿ ಅವರನ್ನು ದಂಡಿಸುತ್ತಿದ್ದರೂ ಕ್ಷಮಿಸುವ ದೇವರಾಗಿದ್ದೀ." (ಕೀರ್ತ.99:8).

4. "ಆತನು ನಿನ್ನ ಎಲ್ಲಾ ಅಪರಾಧಗಳನ್ನು ಕ್ಷಮಿಸುವವನೂ ಸಮಸ್ತರೋಗಗಳನ್ನು ವಾಸಿಮಾಡುವವನೂ ಆಗಿದ್ದಾನೆ." (ಕೀರ್ತ.103:4).

5. "ನೀನು ಪಾಪವನ್ನು ಕ್ಷಮಿಸುವವನಾದ್ದರಿಂದ ಮನುಷ್ಯರ ಭಯಭಕ್ತಿಗೆ ನೀನೇ ಪಾತ್ರನು." (ಕೀರ್ತ.130:3).

6. "ಮನುಷ್ಯನ ವಿವೇಕವು ಅವನ ಸಿಟ್ಟಿಗೆ ಅಡ್ಡಿ, ಪರರ ದೋಷವನ್ನು ಲಕ್ಷಿಸದಿರುವದು ಅವನಿಗೆ ಭೂಷಣ." (ಜ್ಞಾನೋ.19:11).

7. "ದುಷ್ಟನು ತನ್ನ ದುರ್ಮಾರ್ಗವನ್ನು ಬಿಡಲಿ. ಕೆಡುಕನು ತನ್ನ ದುರಾಲೋಚನೆಗಳನ್ನು ತ್ಯಜಿಸಲಿ. ಯೆಹೋವನ ಕಡೆಗೆ ತಿರುಗಿ ಕೊಂಡು ಬರಲಿ. ಆತನು ಅವನನ್ನು ಕರುಣಿಸುವನು." (ಯೆಶಾ.55:7).

8. "ಅವರು ನನಗೆ ವಿರುದ್ಧವಾಗಿ ಮಾಡಿರುವ ಅಧರ್ಮ ವನ್ನೆಲ್ಲಾ ತೊಲಗಿಸಿ ಅವರನ್ನು ಶುದ್ಧೀಕರಿಸುವೆನು." (ಯೆರೆ.33:8).

9. "ಆ ಕಾಲದಲ್ಲಿ ಇಸ್ರಾಯೇಲಿನ ಅಧರ್ಮವನ್ನು ಎಲ್ಲಿ ಹುಡುಕಿದರೂ ಅದು ಇರುವದೇ ಇಲ್ಲ. ಯೆಹೂದದ ಪಾಪವನ್ನು

ಎಲ್ಲಿ ತಡಕಿ ದರೂ ಸಿಕ್ಕುವದೇ ಇಲ್ಲ. ನಾನು ಉಳಿಸುವ ಜನಶೇಷವನ್ನು ಕ್ಷಮಿಸುವೆನಲ್ಲವೆ. ಇದು ಯೆಹೋವನ ನುಡಿ." (ಯೆರೆ.50:20).

10."ಮಗನೇ, ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ. ಎಂದು ಹೇಳಿದನು." (ಮಾರ್ಕ.2:5).

## 78. ಕನಿಕರಿಸುವ ದೇವರು!

1. "ವೈರಿಗಳ ಹಿಂಸೆಯನ್ನು ತಾಳಲಾರದ ಇಸ್ರಾಯೇಲ್ಯರ ಗೋಳಾಟವನ್ನು ಯೆಹೋವನು ಕೇಳಿ ಕನಿಕರಪಟ್ಟು, ನ್ಯಾಯಸ್ಥಾಪಕರನ್ನು ಎಬ್ಬಿಸಿ ಅವರ ಜೀವಮಾನವೆಲ್ಲಾ ಅವರ ಸಂಗಡ ಇದ್ದು ಅವರ ಮೂಲಕವಾಗಿ ಇಸ್ರಾಯೇಲ್ಯರನ್ನು ಶತ್ರುಗಳಿಂದ ಬಿಡಿಸಿದನು." (ನ್ಯಾಯ.2:18).

2. "ದೇವದೂತನು ಯೆರೂಸಲೇಮನ್ನು ಸಂಹರಿಸುವದಕ್ಕೆ ಕೈ ಚಾಚಿದಾಗ ಯೆಹೋವನು ಆ ಕೇಡಿನ ವಿಷಯದಲ್ಲಿ ಪಶ್ಚಾತ್ತಾಪಪಟ್ಟು, ಸಂಹಾರಕ ದೂತನಿಗೆ ಈಗ ಸಾಕು, ನಿನ್ನ ಕೈಯನ್ನು ಹಿಂದೆಗೆ ಎಂದು ಆಜ್ಞಾಪಿಸಿದನು." (2 ಸಮು.24:16).

3. "ತನ್ನ ಒಡಂಬಡಿಕೆಯನ್ನು ನೆನಪು ಮಾಡಿಕೊಂಡು ತನ್ನ ಕೃಪಾತಿಶಯದಿಂದ ಅವರನ್ನು ಕನಿಕರಿಸಿದನು." (ಕೀರ್ತ.106:45).

4. "ಅವರು ಒಂದು ವೇಳೆ ಕಿವಿಗೊಟ್ಟು, ತಮ್ಮ ತಮ್ಮ ದುರ್ಮಾರ್ಗಗಳಿಂದ ಹಿಂದಿರುಗಿಯಾರು. ಹಾಗಾದರೆ ಅವರಿಗೆ ಮಾಡಬೇಕೆಂದಿದ್ದ ಕೇಡನ್ನು ಮನಮರುಗಿ ಮಾಡದಿರುವೆನು." (ಯೆರೆ.26:3).

5. “ನಿಮ್ಮ ಬಟ್ಟೆಗಳನ್ನಲ್ಲ ನಿಮ್ಮ ಹೃದಯಗಳನ್ನು ಹರಿದುಕೊಂಡು ನಿಮ್ಮ ದೇವರಾದ ಯೆಹೋವನ ಕಡೆಗೆ ತಿರುಗಿಕೊಳ್ಳಿರಿ. ಆತನು ದಯೆಯೂ ಕನಿಕರವೂ ದೀರ್ಘಶಾಂತಿಯೂ ಮಹಾಕೃಪೆಯೂ ಉಳ್ಳವನಾಗಿ ಮಾಡಬೇಕೆಂದಿದ್ದ ಕೇಡಿಗೆ ಮನ ಮರುಗುತ್ತಾನೆ.” (ಯೋವೇ.2:13).

6. “ನಿನ್ನ ಸಹೋದರನು ತಪ್ಪು ಮಾಡಿದರೆ ಅವನನ್ನು ಗದರಿಸು. ಅವನು ಪಶ್ಚಾತ್ತಾಪಪಟ್ಟರೆ ಅವರನನ್ನು ತಪ್ಪನ್ನು ಕ್ಷಮಿಸುಬಿಡು.” (ಲೂಕ.17:3).

7. “ದೇವರು ನಿನವೆಯವರ ಕಾರ್ಯಗಳನ್ನು ನೋಡಿ ಅವರು ತಮ್ಮ ದುರ್ಮಾರ್ಗದಿಂದ ತಿರುಗಿಕೊಂಡರೆಂದು ತಿಳಿದು ಮನಮರುಗಿ ತಾನು ಅವರಿಗೆ ಮಾಡುವೆನೆಂದು ಪ್ರಕಟಿಸಿದ್ದ ಕೇಡನ್ನು ಮಾಡದೆ ಬಿಟ್ಟನು.” (ಯೋನ.3:10).

8. “ನಿಮಗೆ ದುಃಖವಾಯಿತೆಂದು ನಾನು ಸಂತೋಷಪಡದೆ ನೀವು ದುಃಖಪಟ್ಟು ಬೇರೆ ಮನಸ್ಸನ್ನು ಹೊಂದಿದ್ದಕ್ಕಾಗಿ ಸಂತೋಷಪಡುತ್ತೇನೆ.” (2ಕೊರಿ.7:9).

9. “ಯೆಹೋವನು ಮನಮರುಗಿ ಈ ದರ್ಶನ ನೆರವೇರದು ಅಂದನು.” (ಆಮೋ.7:3).

10. “ಯೆಹೋವನು ಸದಾಕಾಲಕ್ಕೂ ಬಿಟ್ಟು ಬಿಡುವವನಲ್ಲ. ಆತನು ವ್ಯಥೆಗೊಳಿಸಿದರೇನು? ತನ್ನ ಕೃಪಾತಿಶಯದಿಂದ ಕನಿಕರಿಸುವನು.” (ಪ್ರಲಾ.3:31,32).

# 79. ಮನೋಲ್ಲಾಸ!

1. "ದೀನರು ದೇಶವನ್ನು ಅನುಭವಿಸುವರು. ಅವರು ಮಹಾ ಸೌಖ್ಯದಿಂದ ಆನಂದಿಸುವರು." (ಕೀರ್ತ.37:11).

2. "ನಿನ್ನ ನಿಬಂಧನೆಗಳಲ್ಲಿ ಉಲ್ಲಾಸಪಡುವೆನು, ನಿನ್ನ ವಾಕ್ಯವನ್ನು ಮರೆಯುವದಿಲ್ಲ." (ಕೀರ್ತ.119:16).

3. "ನಾನು ಬದುಕುವಂತೆ ನಿನ್ನ ಕರುಣೆಯು ನನಗೆ ದೊರೆಯಲಿ. ನಿನ್ನ ಧರ್ಮಶಾಸ್ತ್ರವೇ ನನಗೆ ಆನಂದವಾಗಿದೆ." (ಕೀರ್ತ.119:77).

4. "ನಿನ್ನ ಧರ್ಮಶಾಸ್ತ್ರವು ನನಗೆ ಆನಂದಕರವಾಗದಿದ್ದರೆ ನನಗೊದಗಿದ ಆಪತ್ತಿನಲ್ಲಿ ಹಾಳಾಗಿ ಹೋಗುತ್ತಿದ್ದೆನು." (ಕೀರ್ತ.119:92).

5. "ಆತನ ಭೂಲೋಕದಲ್ಲಿ ಉಲ್ಲಾಸಿಸುತ್ತಾ ಮಾನವ ಸಂತಾನದಲ್ಲಿ ಹರ್ಷಿಸುತ್ತಾ ಇದ್ದೆನು." (ಜ್ಞಾನೋ.8:31).

6. "ಹರ್ಷ ಹೃದಯದಿಂದ ಹಸನ್ಮುಖ. ಮನೋ ವ್ಯಥೆಯಿಂದ ಆತ್ಮಭಂಗ." (ಜ್ಞಾನೋ.15:13).

7. "ಯಾವಾಗಲೂ ಕರ್ತನಲ್ಲಿ ಸಂತೋಷಿಸಿರಿ; ಸಂತೋಷಪಡಿರಿ ಎಂದು ತಿರಿಗಿ ಹೇಳುತ್ತೇನೆ." (ಫಿಲಿ.4:4).

8. "ಯೆಹೋವನಲ್ಲಿ ಭರವಸವಿಟ್ಟು ಒಳ್ಳೆದನ್ನು ಮಾಡು; ದೇಶದಲ್ಲಿ ವಾಸವಾಗಿದ್ದು ನಂಬಿಕೆಯನ್ನು ಅನುಸರಿಸು. ಆಗ ಯೆಹೋವನಲ್ಲಿ ಸಂತೋಷಿಸುವಿ." (ಕೀರ್ತ.37:3).

9. "ಯೆಹೋವನನ್ನು ಸಂತೋಷದಿಂದ ಸೇವಿಸಿರಿ. ಉತ್ಸಾಹ ಧ್ವನಿ ಮಾಡುತ್ತಾ ಆತನ ಸನ್ನಿಧಿಗೆ ಬನ್ನಿರಿ." (ಕೀರ್ತ.100:2).

10."ಯೆಹೋವನು ಆನಂದಿಸುವದು ತನ್ನ ಕೃಪೆಯನ್ನು ನಿರೀಕ್ಷಿಸುವ ಭಕ್ತರಲ್ಲೇ." (ಕೀರ್ತ.147:11).

## 80. ಸದಾಚಾರ!

1. "ಯೆಹೋವನ ಧರ್ಮಶಾಸ್ತ್ರವನ್ನು ಅನುಸರಿಸಿ ಸದಾಚಾರಿಗಳಾಗಿ ನಡೆಯುವವರು ಧನ್ಯರು." (ಕೀರ್ತ.119:1).

2. "ನೀನು ನನಗೆ ಜೀವ ಮಾರ್ಗವನ್ನು ತಿಳಿಯಪಡಿಸುವಿ. ನಿನ್ನ ಸಮುಖದಲ್ಲಿ ಪರಿಪೂರ್ಣ ಸಂತೋಷವಿದೆ." (ಕೀರ್ತ.16:11).

3. "ನಾನು ಜ್ಞಾನಮಾರ್ಗವನ್ನು ಉಪದೇಶಿಸಿ ಧರ್ಮಮಾರ್ಗದಲ್ಲಿ ನಿನ್ನನ್ನು ನಡಿಸುವೆನು." (ಜ್ಞಾನೋ.4:11).

4. "ದುಷ್ಟರ ಮಾರ್ಗದಲ್ಲಿ ಸೇರದಿರು; ಕೆಟ್ಟವರ ದಾರಿಯಲ್ಲಿ ನಡೆಯಬೇಡ." (ಜ್ಞಾನೋ.4:14).

5. "ಯೆಹೋವನು ಹೀಗೆ ಹೇಳುತ್ತಾನೆ.- ಜನಾಂಗಗಳ ಆಚರಣೆಯನ್ನು ಅಭ್ಯಾಸಿಸದಿರಿ. ಜನಾಂಗಗಳು ಹೆದರುವ ಆಕಾಶದ ಉತ್ಪಾತಗಳಿಗೆ ನೀವು ಹೆದರಬೇಡಿರಿ." (ಯೆರೆ.10:2).

6. "ಸಹೋದರರರೇ, ನಿಮ್ಮಲ್ಲಿ ಒಬ್ಬನು ಸತ್ಯ ಮಾರ್ಗವನ್ನು ತಪ್ಪಿಹೋಗಿರಲಾಗಿ ಮತ್ತೊಬ್ಬನು ಅವನನ್ನು ಸನ್ಮಾರ್ಗಕ್ಕೆ ತಂದರೆ ಒಬ್ಬ ಪಾಪಿಯನ್ನು ತಪ್ಪಾದ ಮಾರ್ಗದಿಂದ ತಿರುಗಿಸಿದವನು ಅವನ

ಪ್ರಾಣವನ್ನು ಮರಣಕ್ಕೆ ತಪ್ಪಿಸಿ ಬಹುಪಾಪವನ್ನು ಮುಚ್ಚಿದವನಾದನೆಂದು ತಿಳಿಯಿರಿ.'' (ಯಾಕೊ.5:19,20).

7. ''ಯೇಸು ನಮಗೋಸ್ಕರ ಪ್ರತಿಷ್ಠಿಸಿದ ಜೀವವುಳ್ಳ ಹೊಸ ದಾರಿಯಲ್ಲಿ ಆತನ ರಕ್ತದ ಮೂಲಕ ಆತನ ಶರೀರವೆಂಬ ತೆರೆಯ ಮುಖಾಂತರ ದೇವರ ಸಮಕ್ಷಮದಲ್ಲಿ ಪ್ರವೇಶಿಸುವದಕ್ಕೆ ನಮಗೆ ಧೈರ್ಯವುಂಟಾಯಿತು.'' (ಇಬ್ರಿ.10:19,20).

8. ''ಯೋಹಾನನು ಧರ್ಮಮಾರ್ಗವನ್ನು ಬೋಧಿಸುವವನಾಗಿ ನಿಮ್ಮ ಬಳಿಗೆ ಬಂದನು. ನೀವು ಅವನನ್ನು ನಂಬಲಿಲ್ಲ.'' (ಮತ್ತಾ.21:32).

9. ''ಅವನು ಕರ್ತನ ಮಾರ್ಗದ ವಿಷಯದಲ್ಲಿ ಉಪದೇಶ ಹೊಂದಿದವನಾಗಿದ್ದನು.'' (ಅಪೊ.18:25).

10.''ಅವರು ನೀತಿಮಾರ್ಗವನ್ನು ತಿಳಿದು ತಮಗೆ ಕೊಡಲ್ಪಟ್ಟ ಪರಿಶುದ್ಧ ಆಜ್ಞೆಯಿಂದ ತೊಲಗಿ ಹೋಗುವದಕ್ಕಿಂತ ಆ ಮಾರ್ಗವನ್ನು ತಿಳಿಯದಿದ್ದರೆ ಮೇಲಾಗಿತ್ತು.'' (2 ಪೇತ್ರ.2:21).

## 81. ಜಯ ಕೊಡುವಾತನು!

1. ''ದೇವರು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ನಮಗೆ ಜಯವನ್ನು ಕೊಟ್ಟಿದ್ದಾನೆ.'' (1 ಕೊರಿ.15:57).

2. ''ಲೋಕದಲ್ಲಿನಿಮಗೆ ಸಂಕಟ ಉಂಟು; ಧೈರ್ಯವಾಗಿರಿ; ನಾನು ಲೋಕವನ್ನು ಜಯಿಸಿದ್ದೇನೆ.'' (ಯೋಹಾ.16:33).

3. "ಶತ್ರುಗಳ ಜಯಧ್ವನಿ ಇಲ್ಲದ್ದರಿಂದ ನಿನ್ನ ಒಲುಮೆ ನನಗುಂಟೆಂದು ತಿಳಿದುಕೊಳ್ಳುವೆನು." (ಕೀರ್ತ.41:11).

4. "ಸತ್ಯತೆ ದೈನ್ಯ ನೀತಿಗಳನ್ನು ಸ್ಥಾಪಿಸುವದಕ್ಕಾಗಿ ಆಡಂಬರದಿಂದ ವಾಹನಾರೂಢನಾಗಿ ವಿಯೋತ್ಸವದೊಡನೆ ಹೊರಡೋಣವಾಗಲಿ." (ಕೀರ್ತ.45:4).

5. "ಅಶ್ವಬಲವು ಯುದ್ಧದಿನಕ್ಕಾಗಿ ಸನ್ನದ್ಧವಾಗಿದ್ದರೂ ಜಯವು ಯೆಹೋವನದೇ." (ಜ್ಞಾನೋ.21:31).

6. "ಯೆಹೋವನೇ, ರಾಜ್ಯವು ನಿನ್ನದು; ನೀನು ಮಹೋನ್ನತನಾಗಿ ಸರ್ವವನ್ನೂ ಆಳುವವನಾಗಿದ್ದೀ." (1 ಪೂ.ವೃ.29:11).

7. "ದೇವರಿಂದ ಹುಟ್ಟಿದ್ದೆಲ್ಲವೂ ಲೋಕವನ್ನು ಜಯಿಸುತ್ತದೆ. ಲೋಕವನ್ನು ಜಯಿಸುವಂಥದ್ದು ನಮ್ಮ ನಂಬಿಕೆಯೋ." (1 ಯೋಹಾ.5:4).

8. "ಕರ್ತನಾದ ಯೇಸು ಕ್ರಿಸ್ತನ ಮೂಲಕ ನಮಗೆ ಜಯವನ್ನು ಕೊಟ್ಟಿದ್ದಾನೆ; ಆತನಿಗೆ ಸ್ತೋತ್ರ." (1 ಕೊರಿ.15:57).

9. "ಯಜ್ಞದ ಕುರಿಯಾದಾತನ ರಕ್ತದ ಬಲದಿಂದಲೂ ತಮ್ಮ ವಾಕ್ಯದ ಬಲದಿಂದಲೂ ಅವನನ್ನು ಜಯಿಸಿದರು." (ಪ್ರಕ.12:11).

10. "ಜಯಹೊಂದುವವರು ಇವುಗಳಿಗೆ ಬಾಧ್ಯನಾಗುವನು; ನಾನು ಅವನಿಗೆ ದೇವರಾಗಿರುವೆನು. ಅವನು ನನಗೆ ಮಗನಾಗಿರುವನು." (ಪ್ರಕ.21:7).

## 82. ಆಶ್ರಯಕೊಡುವಾತನು!

1. "ಅಪಾಯಕಾಲದಲ್ಲಿ ಆತನು ನನ್ನನ್ನು ಗುಪ್ತ ಸ್ಥಳದಲ್ಲಿ ಅಡಗಿಸುವನು. ತನ್ನ ಗುಡಾರವೆಂಬ ಆಶ್ರಯ ಸ್ಥಾನದಲ್ಲಿ ನನ್ನನ್ನು ಭದ್ರಪಡಿಸುವನು." (ಕೀರ್ತ.27:5).

2. "ನನಗೆ ನಿರಂತರವೂ ನಿನ್ನ ಗುಡಾರದಲ್ಲಿ ಬಿಡಾರವಾಗಲಿ, ನಿನ್ನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳುವಂತೆ ಅನುಗ್ರಹಿಸು." (ಕೀರ್ತ.61:4).

3. "ನೀನೇ ನನಗೆ ಮರೆಯು, ನಿರಪಾಯವಾಗಿ ನನ್ನನ್ನು ಕಾಯುವಿ. ವಿಮೋಚನ ಧ್ವನಿಯಿಂದ ನನ್ನನ್ನು ಆವರಿಸಿಕೊಳ್ಳುತ್ತೀ." (ಕೀರ್ತ.32:7).

4. "ಪರಾತ್ಪರನ ಮರೆಹೊಕ್ಕಿರುವವನು ಸರ್ವಶಕ್ತನ ಆಶ್ರಯದಲ್ಲಿ ಸುರಕ್ಷಿತನಾಗಿರುವನು." (ಕೀರ್ತ.91:1).

5. "ನೀನು ದೀನರಿಗೆ ಕೋಟೆ, ಇಕ್ಕಟ್ಟಿನಲ್ಲಿ ದರಿದ್ರರಿಗೆ ರಕ್ಷಣ ದುರ್ಗ, ಬಿಸಿಲಿಗೆ ನೆರಳು. ಭೀಕರರ ಶ್ವಾಸವು ಗೋಡೆಗೆ ಬಡಿದುಬಿಡುವ ಬಿರುಗಾಳಿಯಂತಿರುವಾಗ ಆಶ್ರಯವೂ ಆಗಿದ್ದಿ." (ಯೆಶಾ.25:4).

6. "ಹಗಲಿನ ಬಿಸಿಲಲ್ಲಿ ನೆರಳನ್ನೂ ಸಣ್ಣ ದೊಡ್ಡ ಮಳೆಗಳಲ್ಲಿ ಆಶ್ರಯವನ್ನೂ ಕೊಡುವ ಮಂಟಪವಿರುವುದು." (ಯೆಶಾ.4:6).

7. "ಬಂಡೆಯ ಬಿರುಕುಗಳಲ್ಲಿಯೂ ಝರಿಯ ಮರೆಯಲ್ಲಿಯೂ ಇರುವ ನನ್ನ ಪಾರಿವಾಳವೇ ನಿನ್ನ ರೂಪು ನನಗೆ ಕಾಣಿಸು, ನಿನ್ನ ದನಿ ಕೇಳಿಸು." (ಪರಮ.2:14).

8. "ನಿನ್ನ ರೆಕ್ಕೆಗಳ ಮರೆಯಲ್ಲಿಟ್ಟುಕೊಂಡು ನನ್ನನ್ನು ಕಾಯಿ; ಕಣ್ಣು ಗುಡ್ಡಿನಂತೆ ಕಾಪಾಡು." (ಕೀರ್ತ.17:9).

9. "ಮಾನವರು ನಿನ್ನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳುತ್ತಾರೆ. ನಿನ್ನ ಮಂದಿರದ ಸಮೃದ್ಧಿಯಿಂದ ಅವರನ್ನು ಸಂತೃಪ್ತಿಪಡಿಸುತ್ತಿ" (ಕೀರ್ತ.36:7,8).

10. "ಮನುಷ್ಯರ ಒಳಸಂಚುಗಳಿಂದ ಹಾನಿ ಉಂಟಾಗದಂತೆ ಅವರನ್ನು ನಿನ್ನ ಸಾನಿಧ್ಯದಲ್ಲಿಯೇ ಮರೆಮಾಡುತ್ತೀ." (ಕೀರ್ತ.31:20).

## 83. ಕನಿಕರವುಳ್ಳಾತನು!

1. "ಯಥಾರ್ಥರಿಗೆ ಕತ್ತಲೆಯಲ್ಲಿಯೂ ಜ್ಯೋತಿ ಮೂಡುವದು. ದಯೆಯೂ ಕನಿಕರವೂ ನೀತಿಯೂ ಉಳ್ಳ ದೇವರೇ ಆ ಜ್ಯೋತಿ." (ಕೀರ್ತ.112:4).

2. "ಯೆಹೋವನೇ, ನೀನು ಕನಿಕರವೂ ದಯೆಯೂ ಉಳ್ಳದೇವರು. ದೀರ್ಘಶಾಂತನು ಬಹಳ ಪ್ರೀತಿಯೂ ನಂಬಿಕೆಯೂ ಉಳ್ಳವನು." (ಕೀರ್ತ.86:15).

3. "ಆತನು ತನ್ನ ಅದ್ಭುತಕೃತ್ಯಗಳ ಜ್ಞಾಪಕವನ್ನು ಉಳಿಯಮಾಡಿದ್ದಾನೆ. ಯೆಹೋವನು ದಯೆಯೂ ಕನಿಕರವೂ ಉಳ್ಳವನು." (ಕೀರ್ತ.111:4).

4. "ಯೆಹೋವನು ನಿಮಗೆ ಕೃಪೆ ತೋರಿಸಬೇಕೆಂದು ಕಾದಿರುವನು; ನಿಮ್ಮನ್ನು ಕರುಣಿಸಬೇಕೆಂದು ಉನ್ನತೋನ್ನತನಾಗಿ ಕಾಣಿಸಿಕೊಳ್ಳುವನು." (ಯೆಶಾ.30:18).

5. ''ಯೆರೂಸಲೇಮಿನಲ್ಲಿ ವಾಸಿಸುವ ಚೀಯೋನಿನ ಜನರೇ
ನೀವು ಇನ್ನು ಅಳುವದೇ ಇಲ್ಲ. ನೀವು ಕೂಗಿಕೊಂಡ ಶಬ್ಧವನ್ನು
ಆತನು ಕೇಳಿ ನಿಮಗೆ ಕೃಪೆ ತೋರಿಸೇ ತೋರಿಸುವನು.'' (ಯೆಶಾ.30:19)

6. ''ಜನರ ಗುಂಪುಗಳನ್ನು ನೋಡಿ ಅವರು ಕುರುಬನ್ನಿಲ್ಲದ
ಕುರಿಗಳ ಹಾಗೆ ತೊಳಲಿ ಬಳಲಿ ಹೋಗಿದ್ದಾರಲ್ಲಾ ಎಂದು ಅವರ
ಮೇಲೆ ಕನಿಕರ ಪಟ್ಟನು.'' (ಮತ್ತಾ.9:36).

7. ''ಆತನು ಹೊರಗೆ ಬಂದು ಬಹು ಜನರ ಗುಂಪನ್ನು ಕಂಡು
ಕನಿಕರ ಪಟ್ಟು ಅವರಲ್ಲಿದ್ದ ರೋಗಿಗಳನ್ನು ಸ್ವಸ್ಥಮಾಡಿದನು.''
(ಮತ್ತಾ.14:14).

8. ''ಆದದರಿಂದ ದೇವರ ದಯವು ಮನುಷ್ಯರಿಗೆ
ಇಚ್ಛೈಸುವದರಿಂದಾಗಲಿ ಪ್ರಯತ್ನಿಸುವದರಿಂದಾಗಲಿ ದೊರೆಯದ
ದೇವರು ಕರುಣಿಸುವದರಿಂದಲೇ ದೊರೆಯುತ್ತದೆ.''
(ರೋಮಾ.9:16).

9. ''ಯಾಕೆಂದರೆ ದೇವರು ಎಲ್ಲರಿಗೂ ಕರುಣೆಯನ್ನು ತೋರಿಸ
ಬೇಕೆಂಬ ಉದ್ದೇಶವುಳ್ಳವನಾಗಿದ್ದು ಎಲ್ಲರನ್ನೂ ಅವಿಧೇಯತೆ
ಯೆಂಬ ದುಸ್ಥಿತಿಯಲ್ಲಿ ಕಟ್ಟಿಹಾಕಿದ್ದಾನೆ.'' (ರೋಮಾ.11:32).

10.''ಆದರೆ ಒಬ್ಬ ಸಮಾರ್ಯದವನು ಪ್ರಯಾಣ ಮಾಡುತ್ತಾ
ಅವನಲ್ಲಿಗೆ ಬಂದು ಅವನನ್ನು ಕಂಡು ಕನಿಕರಿಸಿ ಅವನ ಹತ್ತಿರಕ್ಕೆ ಹೋಗಿ
ಅವನ ಗಾಯಗಳಲ್ಲಿ ಎಣ್ಣೆಯನ್ನೂ ದ್ರಾಕ್ಷಾರಸವನ್ನೂ ಹೊಯ್ದು
ಕಟ್ಟಿದನು.'' (ಲೂಕ.10:33,34).

# 84. ರಾಜ್ಯವನ್ನಾಗಿ ಮಾಡಿದನು!

1. "ನಮ್ಮನ್ನು ಪಾಪಗಳಿಂದ ಬಿಡಿಸಿದವನೂ ನಮ್ಮನ್ನು ರಾಜ್ಯವನ್ನಾಗಿಯೂ ತನ್ನ ತಂದೆಯಾದ ದೇವರಿಗೆ ಯಾಜಕರನ್ನಾಗಿಯೂ ಮಾಡಿದವನೂ ಆಗಿರುವಾತನಿಗೆ ಯುಗಯುಗಾಂತರಗಳಲ್ಲಿಯೂ ಘನ ಮಹತ್ವಗಳಿರಲಿ." (ಪ್ರಕ.1:6).

2. "ರಾಜ್ಯವು ಪರಾತ್ಪರನ ಭಕ್ತರಿಗೆ ಲಭಿಸುವದು. ಅವರೇ ಅದನ್ನು ತಲತಲಾಂತರಕ್ಕೂ ಶಾಶ್ವತವಾಗಿ ಅನುಭವಿಸುವರು." (ದಾನಿ.7:18).

3. "ನಿಮ್ಮನ್ನು ಕತ್ತಲೆಯೊಳಗಿಂದ ಕರೆದು ತನ್ನ ಆಶ್ಚರ್ಯಕರವಾದ ಬೆಳಕಿನಲ್ಲಿ ಸೇರಿಸಿದಾತನ ಗುಣಾತಿಶಯಗಳನ್ನು ಪ್ರಚಾರಮಾಡುವವರಾಗುವಂತೆ ದೇವರಾದುಕೊಂಡು ಜನಾಂಗವೂ ರಾಜವಂಶಸ್ಥರಾದ ಯಾಜಕರೂ ಮೀಸಲಾದ ಜನವೂ ಆಗಿದ್ದೀರಿ." (1 ಪೇತ್ರ.2:9).

4. "ಅರಸನು ಯೆಹೋವನಲ್ಲಿಯೇ ಭರವಸವಿಟ್ಟಿದ್ದಾನೆ. ಪರಾತ್ಪರನ ಕೃಪೆಯ ದೆಸೆಯಿಂದ ಅವನು ಕದಲುವದೇ ಇಲ್ಲ." (ಕೀರ್ತ.21:7).

5. "ಆತನು ಜನಾಂಗಗಳನ್ನು ನಮಗೆ ಅಧೀನ ಪಡಿಸಿ ಪರಕುಲದವರನ್ನು ನಮ್ಮ ಕಾಲಕೆಳಗೆ ಹಾಕಿದ್ದಾನೆ." (ಕೀರ್ತ.47:3).

6. "ರಾಜರು ನಿನಗೆ ಸಾಕುತಂದೆಗಳು, ಅವರ ರಾಣಿಯರು ನಿನಗೆ ಸಾಕುತಾಯಿಯರು ಆಗುವರು. ನಿನಗೆ ಸಾಷ್ಟಾಂಗವಾಗಿ ಅಡಬಿದ್ದು ನಿನ್ನ ಪಾದಧೂಳಿಯನ್ನು ನೆಕ್ಕುವರು." (ಯೆಶಾ.49:23).

7. ''ನೀವು ಈ ಆಜ್ಞೆಗಳನ್ನು ಮನಃಪೂರ್ವಕವಾಗಿ ಕೈಕೊಂಡರೆ ದಾವೀದನ ಸಿಂಹಾಸನಾರೂಢರಾದ ಅರಸರು ರಥಾಶ್ವಗಳನ್ನೇರಿದವರಾಗಿ ತಮ್ಮ ಸೇವಕರೊಡನೆಯೂ ಪ್ರಜೆಗಳೊಡನೆಯೂ ಈ ಅರಮನೆಯ ಬಾಗಿಲುಗಳಲ್ಲಿ ಪ್ರವೇಶಿಸುವರು.'' (ಯೆರೆ.22:4).

8. ''ಸೇನಾಧೀಶ್ವರನಾದ ಯೆಹೋವನು ಹೀಗನ್ನುತ್ತಾನೆ. ಕುರಿಗಳ ಹಿಂದೆ ಹೋಗುತ್ತಿದ್ದ ನಿನ್ನನ್ನು ಅಡವಿಯಿಂದ ತೆಗೆದುಕೊಂಡು ನನ್ನ ಪ್ರಜೆಗಳಾದ ಇಸ್ರಾಯೇಲ್ಯರ ಮೇಲೆ ನಾಯಕನನ್ನಾಗಿ ನೇಮಿಸಿದೆನು.'' (2 ಸಮು.7:8).

9. ''ನಿನ್ನ ಮನೆಯೂ ಅರಸುತನವೂ ಸದಾಕಾಲ ಸ್ಥಿರವಾಗಿರುವವು. ನಿನ್ನ ಸಿಂಹಾಸನವು ಶಾಶ್ವತವಾಗಿರುವದು.'' (2 ಸಮು.7:16).

10.''ರಾಜ್ಯಾಧಿಕಾರವು ನಮ್ಮ ಕರ್ತನಿಗೂ ಆತನು ಅಭಿಷೇಕಿಸಿದವನಿಗೂ ಉಂಟಾಯಿತು. ಆತನು ಯುಗಯುಗಾಂತರಗಳಲ್ಲಿಯೂ ರಾಜ್ಯವಾಳುವನು.'' (ಪ್ರಕ.11:15).

## 85. ಕುರುಬನಾದಾತನು!

1. ''ಕರ್ತನು ನನಗೆ ಕುರುಬನು; ಕೊರತೆಪಡೆನು.'' (ಕೀರ್ತ.23:1).

2. ''ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು ತನ್ನ ಕುರಿಗಳಿಗೋಸ್ಕರ ತನ್ನ ಪ್ರಾಣವನ್ನು ಕೊಡುತ್ತಾನೆ.'' (ಯೋಹಾ.10:11).

3. "ನಾನೇ ಒಳ್ಳೇ ಕುರುಬನು.- ತಂದೆಯು ನನ್ನನ್ನು ನಾನು ತಂದೆಯನ್ನು ತಿಳಿದಿರುವಂತೆಯೇ ನಾನು ನನ್ನ ಕುರಿಗಳನ್ನು ತಿಳಿದಿದ್ದೇನೆ." (ಯೋಹಾ.10:14,15).

4. "ಇಸ್ರಾಯೇಲ್ಯರನ್ನು ಕಾಯುವ ಕುರುಬನೇ ಕಿವಿಗೊಡು. ಯೋಸೇಫನ ವಂಶದವರನ್ನು ಕುರಿಹಿಂಡಿನಂತೆ ಕರತಂದವನೇ! ಕೆರೂಬಿಯರ ಮಧ್ಯದಲ್ಲಿ ಆಸೀನನಾಗಿರುವಾತನೇ ಪ್ರಾಕಾಶಿಸು." (ಕೀರ್ತ.80:1).

5. "ಆತನು ಕುರುಬನಂತೆ ಮಂದೆಯನ್ನು ಮೇಯಿಸುವನು. ಮರಿಗಳನ್ನು ಕೈಯಿಂದ ಕೂಡಿಸಿ ಎದೆಗೆತ್ತಿಕೊಳ್ಳುವನು." (ಯೆಶಾ.40:11).

6. "ಕರುಬನು ಮಂದೆಯನ್ನು ಕಾಯುವ ಕುರುಬನಂತೆ ಅವರನ್ನು ಕೂಡಿಸಿ ಕಾಪಾಡುವನು." (ಯೆರೆ.31:10).

7. "ಆಹಾ, ನಾನೇ ನನ್ನ ಕುರಿಗಳನ್ನು ಹಿಂಬಾಲಿಸಿ ಹುಡುಕುವೆನು." (ಯೆಹೆ.34:11).

8. "ನನ್ನ ಹಿಂಡನ್ನು ಕಾಯುವದಕ್ಕೆ ಒಬ್ಬನೇ ಕುರುಬನನ್ನು ಏರ್ಪಡಿಸುವೆನು. ನನ್ನ ಸೇವಕನಾದ ದಾವೀದನೆಂಬ ಆ ಕುರುಬನು ಅದನ್ನು ಮೇಯಿಸುವನು." (ಯೆಹೆ.34:23).

9. "ನೀವು ನನ್ನ ಕುರಿಗಳು, ನನ್ನ ಕಾವಲಿನ ಕುರಿಗಳು; ನರಪ್ರಾಣಿಗಳಾದ ನಿಮಗೆ ನಾನು ದೇವರು ಎಂದು ಕರ್ತನಾದ ಯೆಹೋವನು ಅನ್ನುತ್ತಾನೆ." (ಯೆರೆ.34:31).

10. "ಈ ಹಟ್ಟಿಗೆ ಸೇರದಿರುವ ಬೇರೆ ಕುರಿಗಳು ನನಗೆ ಅವೆ. ಅವುಗಳನ್ನೂ ನಾನು ತರಬೇಕು. ಅವು ನನ್ನ ಸ್ವರಕ್ಕೆ ಕಿವಿಗೊಡುವವು." (ಯೋಹಾ.10:16).

## 86. ಯುದ್ಧಮಾಡುವನು!

1. "ಯೆಹೋವನೇ, ನಿಮಗಾಗಿ ಯುದ್ಧ ಮಾಡುವನು; ನೀವಂತು ಸುಮ್ಮನೆ ಇರ್ರಿ, ಎಂದು ಹೇಳಿದನು." (ವಿಮೋ.14:14).

2. "ನಿಮ್ಮ ದೇವರಾದ ಯೆಹೋವನು ತಾನೇ ನಿಮ್ಮ ಸಂಗಡ ಇದ್ದು ಶತ್ರುಗಳೊಡನೆ ನಿಮಗೋಸ್ಕರ ಯುದ್ಧಮಾಡಿ ನಿಮಗೆ ಜಯವನ್ನುಂಟು ಮಾಡುವನು." (ಧರ್ಮೋ.20:4).

3. "ನಿಮ್ಮ ದೇವರಾದ ಯೆಹೋವನು ತನ್ನ ವಾಗ್ದಾನದಂತೆ ನಿಮಗೋಸ್ಕರ ಯುದ್ಧಮಾಡಿದ್ದರಿಂದ ನಿಮ್ಮಲ್ಲಿ ಒಬ್ಬನು ಸಾವಿರ ಜನರನ್ನೂ ಓಡಿಸುವದಕ್ಕೆ ಶಕ್ತನಾದಾನು." (ಯೆಹೋ.23:10).

4. "ಯೆಹೋವನು ಯುದ್ಧಶೂರನು; ಆತನ ನಾಮದೇಯವು ಯೆಹೋವನೇ." (ವಿಮೋ.15:3).

5. "ಆತನು ಮಹಾಜಯಶಾಲಿಯಾದನು. ಕುದುರೆಗಳನ್ನೂ ರಾಹುತರನ್ನೂ ಸಮುದ್ರದಲ್ಲಿ ಕೆಡವಿನಾಶಮಾಡಿದ್ದಾನೆ." (ವಿಮೋ.15:21).

6. "ಯೆಹೋವನು ಈಟಿ ಕತ್ತಿಗಳಿಲ್ಲದೆ ರಕ್ಷಿಸ ಬಲ್ಲನೆಂಬದು ಇಲ್ಲಿ ಕೂಡಿರುವವರಿಗೆಲ್ಲಾ ಗೊತ್ತಾಗುವದು. ಯಾಕಂದರೆ ಯುದ್ಧ ಫಲವು ಯೆಹೋವನ ಕೈಯಲ್ಲಿದೆ." (1 ಸಮು.17:47).

7. "ನೀನು ನನಗೆ ಯುದ್ಧಕ್ಕಾಗಿ ಶೌರ್ಯವೆಂಬ ನಡುಕಟ್ಟನ್ನು ಬಿಗಿದಿದ್ದೀ. ವಿದುರಾಳಿಗಳನ್ನು ಕುಗ್ಗಿಸಿ ನನಗೆ ಅಧೀನಮಾಡಿದ್ದೀ." (ಕೀರ್ತ.18:39).

8. "ಆತನು ನನ್ನ ಕೈಗಳಿಗೆ ಯುದ್ಧ ವಿದ್ಯೆಯನ್ನೂ ನನ್ನ ಬೆರಳುಗಳಿಗೆ ಕಾಳಗವನ್ನೂ ಕಲಿಸಿದ್ದಾನೆ." (ಕೀರ್ತ.144:1).

9. "ಯೆಹೋವನೇ, ನಿನ್ನ ಭುಜಬಲವು ನಿನ್ನ ಶತ್ರುಗಳನ್ನು ಪುಡಿ ಪುಡಿ ಮಾಡುತ್ತದೆ. ನೀನು ಅತ್ಯಧಿಕ ಮಹತ್ವವುಳ್ಳವನಾಗಿ ನಿನ್ನೆದುರಾಗಿ ನಿಲ್ಲುವವರನ್ನು ಕೆಡವಿ ಬಿಡುತ್ತೀ." (ವಿಮೋ.15:6,7).

10. "ಅಶ್ವಬಲವು ಯುದ್ಧದಿನಕ್ಕಾಗಿ ಸನ್ನದ್ಧವಾಗಿದ್ದರೂ ಜಯವು ಯೆಹೋವನದೇ." (ಜ್ಞಾನೋ.21:31).

## 87. ಉತ್ಸಾಹ ಸ್ತೋತ್ರದ ವಸ್ತ್ರ!

1. "ದುಃಖವಿದ್ದಲ್ಲಿ ಆನಂದ ತೈಲ, ಕುಂದಿದ ಮನಸ್ಸಿಗೆ ಪ್ರತಿಯಾಗಿ ಉತ್ಸಾಹ ಸ್ತೋತ್ರ ವಸ್ತ್ರ ಇವುಗಳನ್ನು ಒದಗಿಸಿಕೊಡುವದಕ್ಕೂ ಆತನು ನನ್ನನ್ನು ಕಳುಹಿಸಿದ್ದಾನೆ." (ಯೆಶಾ.61:3).

2. "ನಾನು ಧರ್ಮವನ್ನು ಧರಿಸಿಕೊಂಡೆನು. ಧರ್ಮವು ನನ್ನನ್ನು ಧರಿಸಿತು. ನನ್ನ ನ್ಯಾಯವೇ ನನಗೆ ನಿಲುವಂಗಿಯೂ ಮಂಡಾಸುವೂ ಆಗಿತ್ತು." (ಯೋಬ.29:14).

3. “ಜಯಶಾಲಿಗೆ ಹೀಗೆ ಶುಭ್ರವಸ್ತ್ರಗಳನ್ನು ಹೊದಿಸುವರು. ಜೀವಬಾಧ್ಯರ ಪಟ್ಟಿಯಿಂದ ಅವನ ಹೆಸರನ್ನುನಾನು ಅಳಿಸಿಬಿಡದೆ ಅವನು ನನ್ನವನೆಂದು ನನ್ನ ತಂದೆಯ ಮುಂದೆಯೂ ಆತನ ದೂತರ ಮುಂದೆಯೂ ಒಪ್ಪುವೆನು.” (ಪ್ರಕ.3:5).

4. “ಪ್ರಕಾಶಮಾನವೂ ನಿರ್ಮಲವೂ ಆದ ನಯವಾದ ನಾರುಮಡಿಯನ್ನು ಧರಿಸಿಕೊಳುವದಕ್ಕೆ ಆಕೆಗೆ ಅನುಗ್ರಹಿಸೋಣ ವಾಗಿತ್ತು.” (ಪ್ರಕ.19:8).

5. “ಶ್ರೇಷ್ಠವಾದ ನಿಲುವಂಗಿಯನ್ನು ತಟ್ಟನೆ ತಂದು ಇವನಿಗೆ ತೊಡಿಸಿರಿ; ಇವನ ಕೈಗೆ ಉಂಗುರವನ್ನು ಇಡಿರಿ. ಕಾಲಿಗೆ ಜೋಡು ಜೋಡು ಮೆಡಿಸಿರಿ.” (ಲೂಕ.15:22).

6. “ನನಗೆ ರಕ್ಷಣೆಯ ವಸ್ತ್ರವನ್ನು ಹೊದಿಸಿ ಧರ್ಮವೆಂಬ ನಿಲುವಂಗಿಯನ್ನು ತೊಡೆಸಿದನು.” (ಯೆಶಾ.61:10).

7. “ಚೀಯೋನೇ, ಎಚ್ಚರಗೊಳ್ಳು, ಎಚ್ಚರಗೊಳ್ಳು ನಿನ್ನ ಪ್ರತಾಪವನ್ನು ಧರಿಸಿಕೋ! ಯೆರೂಸಲೇಮೇ, ಪರಿಶುದ್ಧ ಪಟ್ಟಣವೇ ನಿನ್ನ ಚಂದದ ಉಡುಪನ್ನು ಹಾಕಿಕೋ.” (ಯೆಶಾ.52:1).

8. “ಆಕೆಯು ಜರತಾರಿಯ ವಸ್ತ್ರವನ್ನು ಧರಿಸಿಕೊಂಡಿದ್ದಾಳೆ. ಆಕೆಯು ಬೂಟೇದಾರಿ ಕಸೂತಿ ಕೆಲಸದ ವಸ್ತ್ರಗಳನ್ನು ಧರಿಸಿಕೊಂಡು ಸಖಿಯರಾದ ಪರಿವಾರದೊಂದಿಗೆ ಬರುವಳು.” (ಕೀರ್ತ.45:13,14).

9. "ವಧುವೇ, ನಿನ್ನ ತುಟಿಗಳು ಜೇನುಗರೆಯುತ್ತವೆ. ಜೇನೂ ಹಾಲೂ ನಿನ್ನ ನಾಲಿಗೆಯೊಳಗಿವೆ. ನಿನ್ನ ವಸ್ತ್ರಗಳ ಸುವಾಸನೆಯೋ ಲೆಬನೋನಿನ ಪರಿಮಳವೇ." (ಪರಮ.4:11).

10. "ಆ ವಸ್ತ್ರಗಳನ್ನು ನಿನ್ನ ಅಣ್ಣನಾದ ಆರೋನನಿಗೂ ಅವನ ಮಕ್ಕಳಿಗೂ ತೊಡಿಸಿ ಅವರನ್ನು ಅಭಿಷೇಕಿಸಿ ಉದ್ಯೋಗಕ್ಕೆ ಸೇರಿಸಿ ಪ್ರತಿಷ್ಠಿಸಬೇಕು." (ವಿಮೋ.28:41).

## 88. ವಿಮೋಚಕನು!

1. "ದೇವರು ನಮ್ಮ ಶರಣನೂ ಪರಾತ್ಪರನು ತಮ್ಮ ವಿಮೋಚಕನೂ ಆಗಿದ್ದಾನೆ." (ಕೀರ್ತ.78:35).

2. "ನಾನಂತು ನನ್ನ ನ್ಯಾಯಸ್ಥಾಪಕನು. (ವಿಮೋಚಕನು) ಜೀವಸ್ವರೂಪನೆಂದು ಬಲ್ಲೆನು. ಆತನು ಕಡೆಗೆ ದೂಳಿನ ಮೇಲೆ ಸಾಕ್ಷಿಯಾಗಿ ನಿಂತುಕೊಳ್ಳುವನು." (ಯೋಬಿ.19:25).

3. "ಇಸ್ರಾಯೇಲ್ ಜನವೇ, ಭಯಪಡಬೇಡ, ನಾನೇ ನಿನಗೆ ಸಹಾಯಕನು, ಇಸ್ರಾಯೇಲಿನ ಸದಮಲಸ್ವಾಮಿಯು ನಿನಗೆ ವಿಮೋಚಕನು. ಎಂದು ಯೆಹೋವನು ಅನ್ನುತ್ತಾನೆ." (ಯೆಶಾ.41:14).

4. "ನಿನ್ನನ್ನು ಗರ್ಭದಿಂದಲೂ ರೂಪಿಸುತ್ತಾ ಬಂದಿರುವ ನಿನ್ನ ವಿಮೋಚಕನಾದ ಯೆಹೋವನು ಹೀಗೆನ್ನುತ್ತಾನೆ. ನಾನೇ ಸರ್ವಕಾರ್ಯಕರ್ತನಾದ ದೇವರು." (ಯೆಶಾ.44:24).

5. ''ನಮ್ಮ ವಿಮೋಚಕನಿಗೆ ಸೇನಾಧೀಶ್ವರನಾದ ಯೆಹೋವನೆಂಬ ನಾಮಧೇಯ'' (ಯೆಶಾ.47:4).

6. ''ಯೆಹೋವನು ತನ್ನ ಜನರಿಗೆ ವಿಮೋಚನೆಯನ್ನುಂಟು ಮಾಡಿದ್ದಾನೆ. ತನ್ನ ಒಡಂಬಡಿಕೆಯನ್ನು ನಿತ್ಯವೂ ಸ್ಥಾಪಿಸಿದ್ದಾನೆ.'' (ಕೀರ್ತ.111:9).

7. ''ಬಿಡಿಸುವವನು (ವಿಮೋಚಕನು) ಚೀಯೋನಿನೊಳಗಿಂದ ಹೊರಟುಬಂದು ಯಾಕೋಬನಲ್ಲಿರುವ ಭಕ್ತಿಹೀನತೆಯನ್ನು ನಿವಾರಣೆ ಮಾಡುವನು.'' (ರೋಮಾ.11:26).

8. ''ಇಸ್ರಾಯೇಲನು ನಮ್ಮನ್ನು ಗುರುತಿಸನು; ಕರ್ತಾ, ನೀನೇ ನಮ್ಮ ಪಿತೃ; ಆದಿಯಿಂದಲೂ ನಮ್ಮ ವಿಮೋಚಕನು ಅನ್ನಿಸಿಕೊಂಡಿದ್ದೀ.'' (ಯೆಶಾ.63:16).

9. ''ಪೂರ್ಣವಿಮೋಚನೆಯು ಆತನಿಂದಲೇ ದೊರಕುವದು. ಆತನೇ ಇಸ್ರಾಯೇಲನ್ನು ಅದರ ಸಕಲ ಪಾಪಗಳಿಂದ ವಿಮೋಚಿಸುವನು.'' (ಕೀರ್ತ.130:7,8).

10.''ಕ್ರಿಸ್ತಯೇಸುವು ನಮಗೆ ದೇವರ ಕಡೆಯಿಂದ ಜ್ಞಾನವೂ ನೀತಿ ಶುದ್ಧೀಕರಣ ವಿಮೋಚನೆಗಳಿಗೆ ಕಾರಣನೂ ಆದನು.'' (1 ಕೊರಿ.1:30).

## 89. ನೂತನಪಡಿಸುವಾತನು!

1. ''ಆಗ ಸಿಂಹಾಸನದ ಮೇಲೆ ಕೂತಿದ್ದವನು ಇಗೋ, ಎಲ್ಲವನ್ನೂ ಹೊಸದು ಮಾಡುತ್ತೇನೆ. ಅಂದನು.'' (ಪ್ರಕ.21:5).

2. “ಇಗೋ ಹೊಸಕಾರ್ಯಗಳನ್ನು ಮಾಡುವೆನು. ಈಗ ತಲೆದೋರುತ್ತಲಿದೆ. ನಿಮಗೆ ಕಾಣುವದಿಲ್ಲವೋ?” (ಯೆಶಾ.43:19).

3. “ಯಾವನಾದರೂ ಕ್ರಿಸ್ತನಲ್ಲಿದ್ದರೆ ಅವನು ನೂತನ ಸೃಷ್ಟಿಯಾದನು. ಇಗೋ, ಪೂರ್ವಸ್ಥಿತಿ ಹೋಗಿ ಎಲ್ಲಾ ನೂತನವಾಯಿತು.” (2ಕೊರಿ.5:17).

4. “ದೇವರೇ, ನನ್ನಲ್ಲಿ ಶುದ್ಧ ಹೃದಯವನ್ನು ನಿರ್ಮಿಸು ನನಗೆ ಸ್ಥಿರಚಿತ್ತವನ್ನು ಅನುಗ್ರಹಿಸಿ ನನ್ನನ್ನು ನೂತನ ಪಡಿಸು.” (ಕೀರ್ತ.51:10).

5. “ನೀವು ನಿಮ್ಮ ಅಂತರ್ಯದಲ್ಲಿ ಹೊಸಬರಾಗಿ ನೂತನ ಸ್ವಭಾವವನ್ನು ಧರಿಸಿಕೊಳ್ಳಿರಿ.” (ಎಫೆ.4:23).

6. “ಜನಾಂಗಗಳು ನಿನ್ನ ಧರ್ಮವನ್ನು, ಸಕಲ ರಾಜರು ನಿನ್ನ ವೈಭವವನ್ನು ನೋಡುವರು. ಯೆಹೋವನ ಬಾಯಿ ನೇಮಿಸಿದ ಹೊಸ ಹೆಸರು ನಿನಗೆ ದೊರೆಯುವದು.” (ಯೆಶಾ.62:2).

7. “ಯೆಹೋವನನ್ನು ನಿರೀಕ್ಷಿಸುವವರೋ ಹೊಸ ಬಲವನ್ನು ಹೊಂದುವರು. ಹದ್ದುಗಳಂತೆ ರೆಕ್ಕೆಗಳನ್ನು ಚಾಚಿಕೊಂಡು (ಏರುವರು); ಓಡಿದಣೆಯರು, ನಡೆದು ಬಳಲರು.” (ಯೆಶಾ.40:31).

8. “ನಾನು ಅವರಿಗೆ ಒಂದೇ ಮನಸ್ಸನ್ನು ದಯಪಾಲಿಸಿ ನೂತನಸ್ವಭಾವವನ್ನು ಅವರಲ್ಲಿ ಹುಟ್ಟಿಸುವೆನು.” (ಯೆಹೆ.11.19).

9. ''ಈ ಸ್ವಭಾವವು ಅದನ್ನು ಸೃಷ್ಟಿಸಿದಾತನ ಹೋಲಿಕೆಯ ಮೇರೆಗೆ ದಿನೇ ದಿನೇ ನೂತನವಾಗುತ್ತಾ ಪೂರ್ಣಜ್ಞಾನವನ್ನು ಉಂಟು ಮಾಡುತ್ತದೆ.'' (ಕೊಲೊ.3:10).

10. ''ಇಹಲೋಕದ ನಡವಳಿಕೆಯನ್ನು ಅನುಸರಿಸದೆ ನೂತನ ಮನಸ್ಸನ್ನು ಹೊಂದಿಕೊಂಡು ಪರಲೋಕದವರಾಗಿರಿ.'' (ರೋಮಾ.12:2).

## 90. ಪರಿಶೋಧಿಸುವನು!

1. ''ಯೆಹೋವನ ಮಾತುಗಳು ಯಥಾರ್ಥವಾದವುಗಳೇ; ಅವು ಏಳು ಸಾರಿ ಪುಟಕ್ಕೆ ಹಾಕಿದ ಚೊಕ್ಕಬೆಳ್ಳಿಯೋಪಾದಿಯಲ್ಲಿವೆ.'' (ಕೀರ್ತ.12:6).

2. ''ನೀನು ನನ್ನ ಹೃದಯವನ್ನು ಪರೀಕ್ಷಿಸಿದರೂ ರಾತ್ರಿವೇಳೆ ವಿಚಾರಿಸಿದರೂ ನನ್ನನ್ನು ಪುಟಕ್ಕೆ ಹಾಕಿ ಶೋಧಿಸಿದರೂ ಯಾವ ದುರಾಲೋಚನೆಯಾದರೂ ನನ್ನಲ್ಲಿ ದೊರೆಯುವದಿಲ್ಲ.'' (ಕೀರ್ತ.17:3).

3. ''ಆತನಾದರೋ ನನ್ನ ದಾರಿಯನ್ನು ಬಲ್ಲನು. ಆತನೇ ನನ್ನನ್ನು ಶೋಧಿಸಿನೋಡಿದರೆ ಚೊಕ್ಕ ಭಂಗಾರವಾಗಿ ಕಾಣಿಸುವೆನು.'' (ಯೋಬ.23:10).

4. ''ದೇವರೇ ನಮ್ಮನ್ನು ಶೋಧಿಸಿದಿ; ಬೆಳ್ಳಿಯನ್ನು ಪುಟ್ಕಕ್ಕೆ ಹಾಕುವ ಮೇರೆಗೆ ಶುದ್ಧಿ ಮಾಡಿದಿ.'' (ಕೀರ್ತ.66:10).

5. "ಬೆಳ್ಳಿ ಭಂಗಾರಗಳನ್ನು ಪುಟಕುಲಿಮೆಗಳು ಶೋಧಿಸುವವು; ಹೃದಯಗಳನ್ನು ಶೋಧಿಸುವವನು ಯೆಹೋವನೇ." (ಜ್ಞಾನೋ.17:3).

6. "ಪುಟಕುಲುಮೆಗಳಿಂದ ಬೆಳ್ಳಿಭಂಗಾರಗಳಿಗೆ ಶೋಧನೆಯು ಹೇಗೋ ಹೊಗಳಿಕೆಯಿಂದ ಮನುಷ್ಯನಿಗೆ ಶೋಧನೆಯು ಹಾಗೆ." (ಜ್ಞಾನೋ.27:21).

7. "ನಿನ್ನ ಮೇಲೆ ಕೈಮಾಡಿ ಪುಟಾಹಾಕಿ ಪುಟಾಹಾಕಿ ನಿನ್ನ ಕಲ್ಮಷವನ್ನು ಸಂಪೂರ್ಣವಾಗಿ ಹೋಗಲಾಡಿಸಿ ನಿನ್ನ ಕಂದು ಕಸರನ್ನೆಲ್ಲಾ ತೆಗೆದು ಬಿಡುವೆನು." (ಯೆಶಾ.1:25).

8. "ಜ್ಞಾನಿಗಳಲ್ಲಿಯೂ ಕೆಲವರು ಅಂತ್ಯ ಕಾಲದವರಿಗೆ ಬೀಳುತ್ತಿರುವರು; ಆದದರಿಂದ ಜನರು ಶೋಧಿಸಲ್ಪಟ್ಟು ಶುದ್ಧಿಹೊಂದಿ ಶುಭ್ರವಾಗುವರು. ಅಂತ್ಯವು ಕ್ಲುಪ್ತಕಾಲದಲ್ಲೆ ಆಗುವದು." (ದಾನಿ.11:35,36).

9. "ಅನೇಕರು ತಮ್ಮನ್ನು ಶುದ್ಧೀಕರಿಸಿ ಶುಭ್ರ ಮಾಡಿಕೊಂಡು ಶೋಧಿತರಾಗುವರು; ದುಷ್ಟರು ದುಷ್ಟರಾಗಿಯೇ ನಡೆಯುವರು. ಅವರಲ್ಲಿ ಯಾರಿಗೂ ವಿವೇಕವಿರದು, ಜ್ಞಾನಿಗಳಿಗೆ ವಿವೇಕವಿರುವದು." (ದಾನಿ.12:10).

10. "ನೋಡು ನಿನ್ನನ್ನು ಶೋಧಿಸಿದ್ದೇನೆ, ಆದರೆ ಬೆಳ್ಳಿಯಷ್ಟು ಶೋಧಿಸಲಿಲ್ಲ. ಸಂಕಟವೆಂಬ ಪುಟಕ್ಕೆ ಹಾಕಿ ನಿನ್ನನ್ನು ಪರೀಕ್ಷಿಸಿದ್ದೇನೆ.

ನನಗಾಗಿ ನನಗೋಸ್ಕರವೇ ಇದನ್ನು ಮಾಡುವೆನು. ನನ್ನ ಹೆಸರು ಕೆಡಬಾರದಷ್ಟೆ.'' (ಯೆಶಾ.48:10).

## 91. ಕರ್ತನಿಗೆ ಪ್ರಿಯವಾದದ್ದು!

1. ''ಇಸ್ರಾಯೇಲ್ಯರಿಗೆ ಶುಭವಾಗಬೇಕೆಂಬದೇ ಯೆಹೋವನ ಚಿತ್ತ.'' (ಅರಣ್ಯ.24:1).

2. ''ನಿನ್ನ ವಿಜ್ಞಾಪನೆಯ ಆರಂಭದಲ್ಲಿಯೇ ದೇವರ ಅಪ್ಪಣೆಯಾಯಿತು. ಅದನ್ನು ನಿನಗೆ ತಿಳಿಸಲು ಇಲ್ಲಿಗೆ ಬಂದಿದ್ದೇನೆ. ನೀನು ದೇವರಿಗೆ ಅತಿಪ್ರಿಯ.'' (ದಾನಿ.9:23).

3. ''ಆ ಪುರುಷನು ನನಗೆ - ಅತಿಪ್ರಿಯನೇ ಭಯಪಡಬೇಡ; ನಿನಗೆ ಸಮಾಧಾನವಿರಲಿ ಬಲಗೊಳ್ಳು, ಬಲಗೊಳ್ಳು ಎಂದು ಹೇಳಿದನು.'' (ದಾನಿ.10:19).

4. ''ಕ್ರಿಸ್ತನಿಗೆ ಸೇವೆಯನ್ನು ಮಾಡುವವನು ದೇವರಿಗೆ ಮೆಚ್ಚಿಕೆಯಾದವನಾಗಿಯೂ ಮನುಷ್ಯರಿಗೆ ಸಂಭಾವಿತನಾಗಿಯೂ ಇರುವನಷ್ಟೆ.'' (ರೋಮಾ.14:18).

5. ''ಆದರೂ ಆತನು ನಿಮ್ಮ ಪಿತೃಗಳಲ್ಲಿ ಇಷ್ಟವುಳ್ಳವನಾಗಿ ಅವರನ್ನು ಪ್ರೀತಿಸಿದದರಿಂದ ಈಗ ನಿಮ್ಮ ಅನುಭವಕ್ಕೆ ಬಂದಂತೆ ಅವರ ತರುವಾಯ ಅವರ ಸಂತತಿಯವರಾಗಿ ನಿಮ್ಮನ್ನೇ ಆದುಕೊಂಡನು.'' (ಧರ್ಮೋ.10:15).

6. "ಚಿಕ್ಕ ಹಿಂಡೇ, ಹೆದರಬೇಡ; ಆ ರಾಜ್ಯವನ್ನು ನಿಮಗೆ ದಯ ಪಾಲಿಸುವದಕ್ಕೆ ನಿಮ್ಮ ತಂದೆಯು ಸಂತೋಷವುಳ್ಳವನಾಗಿದ್ದಾನೆ." (ಲೂಕ.12:32).

7. "ನೀನು ಎನ್ನುಲ್ಲಾಸಿನಿ ಎನಿಸಿಕೊಳ್ಳುವಿ. ನಿನ್ನ ಸೀಮೆಗೆ ವಿವಾಹಿತೆ ಎಂಬ ಹೆಸರಾಗುವದು, ಏಕೆಂದರೆ ಯೆಹೋವನು ನಿನ್ನಲ್ಲಿ ಉಲ್ಲಾಸಗೊಳ್ಳುತ್ತಾನೆ." (ಯೆಶಾ.62:4).

8. "ಅವನು ದೇವರನ್ನು ಪ್ರಾರ್ಥಿಸಿ ಆತನ ಒಲುಮೆಗೆ ಪಾತ್ರನಾಗಿ ಆತನ ದರ್ಶನಮಾಡಿ ಉತ್ಸಾಹಧ್ವನಿಗೈದು ತಿರಿಗಿ ಆತನಿಂದ ನೀತಿವಂತನೆನಿಸಿಕೊಳ್ಳುವರು." (ಯೋಬ.33:26).

9. "ಯೆಹೋವನ ಧರ್ಮಶಾಸ್ತ್ರದಲ್ಲಿ ಆನಂದಪಡುವವನಾಗಿ ಅದನ್ನೇ ಹಗಲಿರುಳು ಧ್ಯಾನಿಸುತ್ತಿರುವನೋ ಅವನು ಎಷ್ಟೋ ಧನ್ಯನು." (ಕೀರ್ತ.1:2).

10. "ನೀನು ಉಸಿರಿದ ಧರ್ಮಶಾಸ್ತ್ರವು ಸಾವಿರಾರು ಚಿನ್ನ ಬೆಳ್ಳಿಯ ನಾಣ್ಯಗಳಿಗಿಂತಲೂ ನನಗೆ ಅತಿ ಪ್ರಿಯ." (ಕೀರ್ತ.119:72).

## 92. ನಾಮ ಸ್ಮರಣೆ!

1. "ನಾನು ನಿನ್ನಲ್ಲಿ ನನ್ನ ಶಕ್ತಿಯನ್ನು ತೋರಿಸಿ ನನ್ನ ಹೆಸರನ್ನು ಲೋಕದಲ್ಲೆಲ್ಲಾ ಪ್ರಸಿದ್ಧಿ ಪಡಿಸಬೇಕೆಂಬ ಉದ್ದೇಶದಿಂದಲೇ ನಿನ್ನನ್ನು ಉಳಿಸಿದೆನು." (ವಿಮೋ.9:16).

2. "ನಾನು ನನ್ನ ಹೆಸರನ್ನು ನಿಮ್ಮ ನೆನಪಿಗೆ ಬರಮಾಡುವ ಎಲ್ಲಾ ಸ್ಥಳಗಳಲ್ಲಿಯೂ ನಿಮ್ಮ ಬಳಿಗೆ ಬಂದು ನಿಮ್ಮನ್ನು ಆಶೀರ್ವದಿಸುವೆನು." (ವಿಮೋ.20:24).

3. "ನಿನ್ನ ಹೆಸರು ಯಾವಾಗಲು ಜ್ಞಾಪಕದಲ್ಲಿರುವಂತೆ ನಾನು ಮಾಡುವೆನು." (ಕೀರ್ತ.45:17).

4. "ಯೆಹೋವನಿಗೆ ಕೃತಜ್ಞತಾಸ್ತುತಿ ಮಾಡಿರಿ. ಆತನ ನಾಮದ ಮಹತ್ವವನ್ನು ವರ್ಣಿಸಿರಿ." (ಕೀರ್ತ.105:1).

5. "ಯೆಹೋವನೇ ನೀನು ತಲತಲಾಂತರಕ್ಕೂ ಸ್ಮರಿಸಲ್ಪಡುತ್ತೀ." (ಕೀರ್ತ.135:13).

6. "ನಿನ್ನ ಪರಿಶುದ್ಧಾಲಯದ ಕಡೆಗೆ ಅಡ್ಡಬೀಳುತ್ತೇನೆ. ನಿನ್ನ ಕೃಪೆ, ಸತ್ಯತೆ ಇವುಗಳಿಗೋಸ್ಕರ ನಿನ್ನ ನಾಮವನ್ನು ಕೊಂಡಾಡುತ್ತೇನೆ." (ಕೀರ್ತ.138:2).

7. "ಆತನ ನಾಮದ ಮಹತ್ವವನ್ನು ವರ್ಣಿಸಿರಿ. ಜನಾಂಗಗಳಲ್ಲಿ ಆತನ ಕೃತ್ಯಗಳನ್ನು ಪ್ರಸಿದ್ಧಪಡಿಸಿರಿ. ಆತನ ನಾಮವು ಉನ್ನತೋನ್ನತವೆಂದು ಜ್ಞಾಪಕಪಡಿಸಿರಿ." (ಯೆಶಾ.12:4).

8. "ಆತನು ತನ್ನ ಹೆಸರಿನ ನಿಮಿತ್ತವಾಗಿಯೂ ತನ್ನ ಶೌರ್ಯವನ್ನು ಪ್ರಕಟಿಸುವದಕ್ಕಾಗಿಯೂ ಅವರನ್ನು ರಕ್ಷಿಸಿದನು." (ಕೀರ್ತ.106:8).

9. "ಯೆಹೋವನೇ, ನೀನಾದರೋ ಸದಾ ಸಿಂಹಾಸನಾರೂಢನಾಗಿರುವಿ. ನಿನ್ನ ನಾಮವು ತಲತಲಾಂತರಕ್ಕೂ ಸ್ಮರಿಸಲ್ಪಡುವದು." (ಕೀರ್ತ.102:12).

10. "ಯೆಹೋವನೇ, ನಿನ್ನ ನಾಮಮಹಿಮೆಯನ್ನು ಬಲ್ಲವರು ನಿನ್ನಲ್ಲಿ ಭರವಸವಿಡುವರು. ಯಾಕೆಂದರೆ ನಿನ್ನ ಮರೆಹೋಗುವವರನ್ನು ನೀನು ಕೈಬಿಡುವದಿಲ್ಲ." (ಕೀರ್ತ.9:10).

## 93. ಕೇಡು ಸಂಭವಿಸದು!

1. "ಯಾವ ಕೇಡೂ ನಿನಗೆ ಸಂಭವಿಸದು. ಉಪದ್ರವವು ನಿನ್ನ ಗುಡಾರದ ಸಮೀಪಕ್ಕೂ ಬಾರದು." (ಕೀರ್ತ.91:10).

2. "ಕೆಟ್ಟದ್ದನ್ನು ಬಿಟ್ಟು ಒಳ್ಳೇದನ್ನು ಮಾಡಲಿ, ಸಮಾಧಾನವನ್ನು ಹಾರೈಸಿ ಅದಕ್ಕೋಸ್ಕರ ಪ್ರಯತ್ನಪಡಲಿ." (1 ಪೇತ್ರ.3:11).

3. "ನಂಬಿಕೆಯೆಂಬ ಗುರಾಣಿಯನ್ನು ಹಿಡಿದುಕೊಳ್ಳಿರಿ, ಆದದರಿಂದ ನೀವು ಕೆಡುಕನ ಅಗ್ನಿ ಬಾಣಗಳನ್ನೆಲ್ಲಾ ಆರಿಸುವದಕ್ಕೆ ಶಕ್ತರಾಗುವಿರಿ." (ಎಫೆ.6:16).

4. "ಅವನವನ ಕೆಟ್ಟ ನಡತೆಗಳಿಂದ ತಿರುಗಿಸಿ ನಿಮ್ಮನ್ನು ಆಶೀರ್ವದಿಸಬೇಕೆಂದು ಆತನನ್ನು ಕಳುಹಿಸಿಕೊಟ್ಟಿದ್ದಾನೆ." (ಅಪೊ.3:26).

5. "ಎಲ್ಲವನ್ನೂ ಪರಿಶೋಧಿಸಿ ಒಳ್ಳೇದನ್ನು ಭದ್ರವಾಗಿ ಹಿಡಿದುಕೊಳ್ಳಿರಿ, ಸಕಲ ವಿಧವಾದ ಕೆಟ್ಟತನಕ್ಕೆ ದೂರವಾಗಿರಿ." (1 ಥೆಸ.5:21).

6. "ಇಗೋ, ಯೆಹೋವನ ಭಯವೇ ಜ್ಞಾನವು; ದುಷ್ಟತನವನ್ನು ಬಿಡುವದೇ ವಿವೇಕವು." (ಯೋಬ.28:28).

7. "ನಮ್ಮನ್ನು ಶೋಧನೆಯೊಳಗೆ ಸೇರಿಸದೆ ಕೇಡಿನಿಂದ ನಮ್ಮನ್ನು ತಪ್ಪಿಸು." (ಮತ್ತಾ.6:13).

8. "ನೀವು ಕೆಟ್ಟದ್ದೇನೂ ಮಾಡಬಾರದೆಂದು ನಾವು ದೇವರನ್ನು ಪ್ರಾರ್ಥಿಸುತ್ತೇವೆ." (2 ಕೊರಿ.13:7).

9. "ಯೌವನಸ್ಥರೇ ನೀವು ಕೆಡುಕನನ್ನು ಜಯಿಸಿರುವದರಿಂದ ನಿಮಗೆ ಬರೆಯುತ್ತೇನೆ." ( 1 ಯೋಹಾ.2:13).

10. "ಕೆಟ್ಟದ್ದನ್ನು ದ್ವೇಷಿಸಿರಿ, ಒಳ್ಳೇದನ್ನು ಪ್ರೀತಿಸಿರಿ, ಚಾವಡಿಯಲ್ಲಿ ನ್ಯಾಯವನ್ನು ಸ್ಥಾಪಿಸಿರಿ." (ಆಮೋ.5:15).

## 94. ಪ್ರಭಾವ!

1. "ನೀನು ಅವನನ್ನು ದೇವದೂತರಿಗಿಂತ ಸ್ವಲ್ಪವೇ ಕಡಿಮೆಯಾಗಿ ಮಾಡಿದ್ದಿಯಲ್ಲಾ ಪ್ರಭಾವವನ್ನು ಮಾನವನ್ನೂ ಅವನಿಗೆ ಕಿರೀಟವಾಗಿ ಇಟ್ಟೆ." (ಕೀರ್ತ.8:5).

2. "ನಿನ್ನ ರಕ್ಷಣಾಕಾರ್ಯದಿಂದ ಅವನ ಘನತೆಯು ಬಹು ವೃದ್ಧಿಯಾಯಿತು. ಮಹಿಮಾ ಪ್ರಭಾವವನ್ನು ಅವನಿಗೆ ಬರಮಾಡಿದ್ದೀ." (ಕೀರ್ತ.21:5).

3. "ಶೂರನೇ, ಮಹಿಮಪ್ರಭಾವಗಳನ್ನು ಧರಿಸಿಕೊಂಡು ಸೊಂಟಕ್ಕೆ ಪಟ್ಟದ ಕತ್ತಿಯನ್ನು ಕಟ್ಟಿಕೋ" (ಕೀರ್ತ.45:3).

4. "ಪ್ರಭಾವವುಳ್ಳ ಈ ಅರಸನು ಯಾರು? ಸೇನಾಧೀಶ್ವರನಾದ ಯೆಹೋವನೇ." (ಕೀರ್ತ.24:10).

5. "ನಿನ್ನ ಮಂದಿರದಲ್ಲಿ ನಾನು ನಿನ್ನ ಮಹತ್ತನ್ನು ಪ್ರಭಾವವನ್ನೂ ಕಂಡಪ್ರಕಾರ ಈಗಲೂ ಕಾಣಬೇಕೆಂದು ಅಪೇಕ್ಷಿಸುತ್ತೇನೆ." (ಕೀರ್ತ.63:2).

6. "ನಿನ್ನ ಪರಾಕ್ರಮದ ಮಹತ್ತಿನ ದೆಸೆಯಿಂದ ನಿನ್ನ ಶತ್ರುಗಳು ನಿನ್ನ ಮುಂದೆ ಮುದುರಿಕೊಳ್ಳುವರು." (ಕೀರ್ತ.66:3).

7. "ಯೆಹೋವನು ಎಲ್ಲಾ ಜನಾಂಗಗಳಲ್ಲಿ ಮಹೋನ್ನತನು; ಆತನ ಪ್ರಭಾವವು ಮೇಲಣ ಲೋಕಗಳಲ್ಲಿ ಮೆರೆಯುತ್ತದೆ." (ಕೀರ್ತ.113:4).

8. "ಆತನು ಮಹಿಮೆಯಲ್ಲಿ ಬಂದು ಚೀಯೋನನ್ನು ತಿರಿಗಿ ಕಟ್ಟಿಸಿದನೆಂದೂ ಜನಾಂಗಳು ಯೆಹೋವ ಎಂಬ ನಾಮಕ್ಕೂ ಭೂರಾಜರು ನಿನ್ನ ಪ್ರತಾಪಕ್ಕೂ ಭಯಪಡುವರು." (ಕೀರ್ತ.102:16,17)

9. "ನಿನ್ನ ಚಿತ್ತವನ್ನು ತಿಳಿಯಪಡಿಸಿ ನನ್ನನ್ನು ನಡಿಸಿ ತರುವಾಯ ಮಹಿಮೆಗೆ ಸೇರಿಸಿಕೊಳ್ಳುವಿ." (ಕೀರ್ತ.73:24).

10. "ಕರ್ತನೇ ನಮ್ಮ ದೇವರೇ, ನೀನು ಪ್ರಭಾವ ಮಾನ ಬಲಗಳನ್ನು ಹೊಂದುವದಕ್ಕೆ ಯೋಗ್ಯನಾಗಿದ್ದೀ." (ಪ್ರಕ.4:11).

## 95. ಕಷ್ಟಾರ್ಜಿತವನ್ನು ಅನುಭವಿಸುವಿ!

1. "ನಿನ್ನ ಕಷ್ಟಾರ್ಜಿತವನ್ನು ನೀನೇ ಅನುಭವಿಸುವಿ. ನೀನು ಧನ್ಯನು ನಿನಗೆ ಶುಭವಿರುವದು." (ಕೀರ್ತ.128:2).

2. "ಶಿಷ್ಟನ ದುಡಿತ ಜೀವಾಸ್ಪದ; ದುಷ್ಟನ ಆದಾಯ ಪಾಪಾಸ್ಪದು." (ಜ್ಞಾನೋ.10:16).

3. "ಅನ್ಯ ಜನಾಂಗಗಳ ಕಷ್ಟಾರ್ಜಿತವು ಅವರ ಕೈ ಸೇರಿತು." (ಕೀರ್ತ.105:44)

4. "ಒಬ್ಬನಿಗಿಂತ ಇಬ್ಬರು ಲೇಸು; ಅವರ ಪ್ರಯಾಸಕ್ಕೆ ಒಳ್ಳೆಯ ಲಾಭ." (ಪ್ರಸಂಗಿ.4:9).

5. "ಆತನು ಯಾವನಿಗೆ ಆಸ್ತಿಪಾಸ್ತಿಗಳನ್ನು ದಯಪಾಲಿಸುವದಲ್ಲದೆ ಅದನ್ನು ಅನುಭವಿಸಿ ಪಾಲಿಗೆ ಬಂದದ್ದನ್ನು ಹೊಂದಿ ತನ್ನ ಪ್ರಯಾಸದಲ್ಲಿ ಸಂತೋಷಪಡಲು ಶಕ್ತಿಕೊಡುವನೋ ಅವನ ಸುಖವು ದೇವರ ಅನುಗ್ರಹ." (ಪ್ರಸ.5:19).

6. "ತಮ್ಮ ಕೆಲಸವನ್ನು ನೋಡುತ್ತಾ ತಾವೇ ಸಂಪಾದಿಸಿದ್ದನ್ನು ಊಟಮಾಡಬೇಕೆಂದು ಕರ್ತನಾದ ಯೇಸುಕ್ರಿಸ್ತನಲ್ಲಿ ನಾವು ಆಜ್ಞಾಪಿಸಿ ಬೋಧಿಸುತ್ತೇವೆ." ( 2 ಥೆಸ.3:12).

7. "ನಿಮ್ಮಲ್ಲಿ ಒಬ್ಬರಿಗೂ ಭಾರವಾಗಿರಬಾರದೆಂದು ಹಗಲಿರುಳು ಕಷ್ಟದಿಂದಲೂ ಪ್ರಯಾಸದಿಂದಲೂ ದುಡಿದು ಜೀವನ ಮಾಡಿಕೊಂಡೆವು." (2 ಥೆಸ.3:8).

8. "ಪ್ರತಿಯೊಬ್ಬನು ಅನ್ನಪಾನಗಳನ್ನು ತೆಗೆದುಕೊಂಡು ತನ್ನ ನಾನಾ ಪ್ರಯಾಸಗಳಲ್ಲಿಯೂ ಸುಖವನ್ನು ಅನುಭವಿಸುವದು ದೇವರ ಅನುಗ್ರಹವೇ." (ಪ್ರಸ.3:13).

9. "ಭೂಮಿಯಿಂದ ಸರ್ವಕ್ಕೂ ಲಾಭವಿದೆ. ಹೊಲಗದ್ದೆಗಳಿಂದ ರಾಜನಿಗೆ ಸೇವೆಯಾಗುತ್ತದೆ."(ಪ್ರಸ.5:9).

10."ಅಳುತ್ತಾಬಿತ್ತುವವರು ಹಾಡುತ್ತಾ ಕೊಯ್ಯುವರು ದುಃಖಿಸುತ್ತಾ ಬೀಜವನ್ನು ತೆಗೆದುಕೊಂಡು ಹೋಗುವವರ ಹರ್ಷಿಸುತ್ತಾ ಸಿವಡುಗಳನ್ನು ಹೊತ್ತುಕೊಂಡು ಬರುವರು. (ಕೀರ್ತ.126:5,6).

## 96. ವಿವೇಕವನ್ನು ಕೊಡುವನು!

1. "ಯೆಹೋವನ ಭಯವೇ ಜ್ಞಾನವು; ದುಷ್ಕೃತನವನ್ನು ಬಿಡುವದೇ ವಿವೇಕವು." (ಯೋಬ.28:28).

2. "ಯಾರು ಕಾರ್ಮುಗಿಲಿಗೆ ಜ್ಞಾನವನ್ನು ದಯಪಾಲಿಸಿದರು? ಉತ್ಪಾತಗಳಿಗೆ ವಿವೇಕವನ್ನು ಅನುಗ್ರಹಿಸಿದವರು ಯಾರು?" (ಯೋಬ.8:36).

3. "ಯೆಹೋವನ ಭಯವೇ ಜ್ಞಾನಕ್ಕೆ ಮೂಲವು ಆತನ ಕಟ್ಟಳೆಗಳನ್ನು ನಡಿಸುವವರು ಪೂರ್ಣ ವಿವೇಕಿಗಳು." (ಕೀರ್ತ.111:10).

4. "ಬುದ್ಧಿಗಾಗಿ ಮೊರೆಯಿಟ್ಟು ವಿವೇಕಕ್ಕಾಗಿ ಕೂಗಿಕೊಂಡು, ಅದನ್ನು ಬೆಳ್ಳಿಯಂತೆಯೂ ನಿಕ್ಷೇಪದಂತೆಯೂ ಹುಡುಕು" (ಜ್ಞಾನೋ.2:3,5).

5. ''ಯೆಹೋವನೇ, ಜ್ಞಾನವನ್ನು ಕೊಡುವಾತನು. ಆತನ ಬಾಯಿಂದಲೇ ತಿಳುವಳಿಕೆಯೂ ವಿವೇಕವೂ ಹೊರಟುಬರುತ್ತದೆ.'' (ಜ್ಞಾನೋ.2:6).

6. ''ಮಕ್ಕಳಿರಾ, ತಂದೆಯ ಶಿಕ್ಷಣವನ್ನು ಕೇಳಿರಿ, ವಿವೇಕವನ್ನು ಗ್ರಹಿಸಲಿಕ್ಕೆ ಕಿವಿಗೊಡಿರಿ.'' (ಜ್ಞಾನೋ.4:1).

7. ''ಕಂದಾ ನನ್ನ ಮಾತುಗಳನ್ನು ಅನುಸರಿಸು ನನ್ನ ಆಜ್ಞೆಗಳನ್ನು ಮನಸ್ಸಿನಲ್ಲಿಟ್ಟುಕೋ. ನನ್ನ ಉಪದೇಶವನ್ನು ಕಣ್ಣು ಗುಡ್ಡಿನಂತೆ ಪಾಲಿಸು. ನನ್ನ ಆಜ್ಞೆಗಳನ್ನು ಕೈಕೊಂಡು ಬಾಳು.'' (ಜ್ಞಾನೋ.7:1,2).

8. ''ನಿನ್ನ ಕಟ್ಟಳೆಗಳು ನನ್ನ ಧ್ಯಾನವಾಗಿರುವದರಿಂದ ನನ್ನ ಉಪಾಧ್ಯಾಯರಿಗಿಂತ ಜ್ಞಾನಿಯಾಗಿದ್ದೇನೆ. ನಿನ್ನ ನೇಮಗಳನ್ನು ಕೈಕೊಂಡಿರುವದರಿಂದ ಹಿರಿಯರಿಗಿಂತ ವಿವೇಕಿಯಾಗಿದ್ದೇನೆ.'' (ಕೀರ್ತ.119:99,100).

9. ''ನನಗೆ ಜ್ಞಾನವನ್ನು ದಯಪಾಲಿಸು. ಆಗ ನಿನ್ನ ಧರ್ಮಶಾಸ್ತ್ರವನ್ನು ಪೂರ್ಣ ಮನಸ್ಸಿನಿಂದ ಕೈಕೊಂಡು ನಡೆಯುವೆನು.'' (ಕೀರ್ತ.119:34).

10.''ನೋಡು, ನಿನಗೆ ಜ್ಞಾನವನ್ನೂ ವಿವೇಕವನ್ನೂ ಅನುಗ್ರಹಿಸಿದ್ದೇನೆ. ನಿನ್ನಂಥ ಜ್ಞಾನಿಯು ಮುಂಚೆ ಇರಲಿಲ್ಲ, ಮುಂದೆಯೂ ಇರುವದಿಲ್ಲ.'' (1 ಅರಸು.3:12).

# 97. ಸಂತೋಷವನ್ನು ಕೊಡುವನು!

1. "ನೀತಿವಂತರೇ, ಯೆಹೋವನಲ್ಲಿ ಸಂತೋಷಿಸುತ್ತಾ ಉಲ್ಲಾಸವಾಗಿರ್ರಿ." (ಕೀರ್ತ.32:11).

2. "ಆಗ ನೀನು ನನ್ನ ಗೋಳಾಟವನ್ನು ತಪ್ಪಿಸಿ ಸಂತೋಷದಿಂದ ಕುಣಿದಾಡುವಂತೆ ಮಾಡಿದಿ." (ಕೀರ್ತ.30:11).

3. "ಯೆಹೋವನು ದುರವಸ್ಥೆಯಿಂದ ತಪ್ಪಿಸಿದಾಗ ಆತನ ಪ್ರಜೆಗಳಾಗಿರುವ ಯಾಕೋಬವಂಶದವರು ಉಲ್ಲಾಸಗೊಳ್ಳುವರು, ಇಸ್ರಾಯೇಲ್ಯರು ಹರ್ಷಿಸುವರು." (ಕೀರ್ತ.14:7).

4. "ಆಗ ನನ್ನ ಮನಸ್ಸಿಗೆ ಯೆಹೋವನ ದೆಸೆಯಿಂದ ಹರ್ಷವುಂಟಾಗುವದು. ಆತನಿಂದಾದ ರಕ್ಷಣೆಯ ನಿಮಿತ್ತ ಆನಂದಪಡುವೆನು." (ಕೀರ್ತ.35:9).

5. "ಆತನ ಪರಿಶುದ್ಧ ನಾಮದಲ್ಲಿ ಹಿಗ್ಗಿರಿ. ಯೆಹೋವನ ದರ್ಶನವನ್ನು ಕೋರುವವರ ಹೃದಯವು ಹರ್ಷಿಸಲಿ" (1 ಪೂರ್ವ.16:10).

6. "ಈ ದಿನವು ನಮ್ಮ ಯೆಹೋವನಿಗೆ ಪ್ರತಿಷ್ಠಿತ ದಿನವಾಗಿರುವದರಿಂದ ವ್ಯಸನ ಪಡಬೇಡಿರಿ. ಯೆಹೋವನ ಆನಂದವೇ ನಿಮ್ಮ ಆಶ್ರಯವಾಗಿದೆ." (ನೆಹೆ.8:10).

7. "ಸದ್ಭಕ್ತರು ಯೆಹೋವನಲ್ಲಿ ಆನಂದಪಟ್ಟು ಆತನನ್ನೇ ಆಶ್ರಯಿಸಿ ಕೊಳ್ಳುವರು. ಸರಳ ಹೃದಯರೆಲ್ಲರೂ ಹಿಗ್ಗುವರು." (ಕೀರ್ತ.64:10).

8. "ಯೆಹೋವನೇ, ನಿನ್ನ ಕ್ರಿಯೆಗಳಿಂದ ನನ್ನನ್ನು ಸಂತೋಷಪಡಿಸಿದ್ದೀ. ನಿನ್ನ ಕೆಲಸಗಳ ದೆಸೆಯಿಂದ ಉತ್ಸಾಹಧ್ವನಿ ಮಾಡುತ್ತೇನೆ." (ಕೀರ್ತ.92:4).

9. "ನೀತಿವಂತರೇ, ಯೆಹೋವನಲ್ಲಿ ಆನಂದಿಸಿರಿ. ಆತನ, ಪರಿಶುದ್ಧ ನಾಮವನ್ನು ಕೊಂಡಾಡಿರಿ." (ಕೀರ್ತ.97:12).

10. "ಉತ್ಸಾಹಧ್ವನಿಯೂ ಜಯಘೋಷವೂ ನೀತಿವಂತರ ಗುಡಾರಗಳಲ್ಲಿವೆ." (ಕೀರ್ತ.118:15).

## 98. ವ್ಯಾಧಿ ಉಂಟಾಗದಂತೆ ಮಾಡುವನು!

1. "ನಿಮ್ಮ ದೇವರಾದ ಯೆಹೋವನೊಬ್ಬನನ್ನೇ ಆರಾಧಿಸಬೇಕು. ಆಗ ಆತನು ನಿಮ್ಮ ಅನ್ನ ಪಾನಗಳನ್ನು ಆಶೀರ್ವದಿಸುವನು. ನಿಮ್ಮೊಳಗೆ ಯಾವ ವ್ಯಾಧಿಯೂ ಉಂಟಾಗದಂತೆ ಮಾಡುವನು." (ವಿಮೋ.23:25).

2. "ಅವನು ಅಸ್ವಸ್ಥನಾಗಿ ಬಿದ್ದುಕೊಂಡಿರುವಾಗ ಯೆಹೋವನು ಅವನನ್ನು ಉದ್ಧರಿಸುವನು. ಅವನ ರೋಗವನ್ನೆಲ್ಲಾ ಪರಿಹರಿಸಿ ಆರೋಗ್ಯವನ್ನುಂಟು ಮಾಡಿದ್ದಿಯಲ್ಲಾ ಸ್ವಾಮೀ." (ಕೀರ್ತ.41:3).

3. "ಚೀಯೋನಿನ ಯಾವ ನಿವಾಸಿಯೂ ತಾನು ಅಸ್ವಸ್ಥನು ಎಂದು ಹೇಳನು. ಅಲ್ಲಿಯ ಜನರ ಪಾಪವು ಪರಿಹಾರವಾಗುವದು." (ಯೆಶಾ.33:24).

4. "ತರತರದ ರೋಗಬಾಧೆಗಳಿಂದ ಕಷ್ಟಪಡುವವರನ್ನೂ ದೆವ್ವ ಹಿಡಿದವರನ್ನೂ ಮೂರ್ಛಾ ರೋಗಿಗಳನ್ನೂ ಪಾರ್ಶ್ವವಾಯು ಬಿನವರನ್ನೂ ಆತನ ಬಳಿಗೆ ಕರತಂದರು. ಆತನು ಅವರನ್ನು ಸ್ವಸ್ಥಮಾಡಿದನು." (ಮತ್ತಾ.4:24).

5. "ರೋಗಿಗಳನ್ನು ಸ್ವಸ್ಥಮಾಡಿರಿ. ಸತ್ತವರನ್ನು ಬದುಕಿಸಿರಿ. ಕುಷ್ಠ ಹತ್ತಿದವರನ್ನು ಶುದ್ಧಮಾಡಿರಿ. ದೆವ್ವಗಳನ್ನು ಬಿಡಿಸಿರಿ; ಉಚಿತವಾಗಿ ಹೊಂದಿದ್ದೀರಿ. ಉಚಿತವಾಗಿ ಕೊಡಿರಿ. (ಮತ್ತಾ.10:8).

6. "ನಿಮ್ಮಲ್ಲಿ ಅಸ್ವಸ್ಥನಾಗಿರುವವನು ಇದ್ದಾನೋ? ಅವನು ಸಭೆಯ ಹಿರಿಯರನ್ನು ಕರೇ ಕಳುಹಿಸಲಿ, ಅವರು ಕರ್ತನ ಹೆಸರಿನಿಂದ ಅವನಿಗೆ ಎಣ್ಣೆ ಹಚ್ಚಿ ಅವನಿಗೋಸ್ಕರ ದೇವರನ್ನು ಪ್ರಾರ್ಥಿಸಲಿ." (ಯಾಕೊ.5:14).

7. "ಕ್ಷೇಮದಿಂದಿರುವವರಿಗೆ ವೈದ್ಯನು ಬೇಕಾಗಿಲ್ಲ, ಕ್ಷೇಮವಿಲ್ಲದವರಿಗೆ ಬೇಕು." (ಮತ್ತಾ.9:12).

8. "ಆತನು ನಿನ್ನ ಎಲ್ಲಾ ಅಪರಾಧಗಳನ್ನು ಕ್ಷಮಿಸುವವನೂ ಸಮಸ್ತ ರೋಗಗಳನ್ನು ವಾಸಿಮಾಡುವವನು." (ಕೀರ್ತ.103:3).

9. "ಆತನು ತನ್ನ ದೂತರನ್ನೋ ಎಂಬಂತೆ ತನ್ನ ವಾಕ್ಯವನ್ನು ಕಳುಹಿಸಿ ಅವರನ್ನು ಗುಣಪಡಿಸಿದನು." (ಕೀರ್ತ.107:20).

10. "ನನ್ನ ನಾಮದಲ್ಲಿ ಭಯಭಕ್ತಿಯಿಟ್ಟಿರುವ ನಿಮಗೋ ದೇವರ ಧರ್ಮವೆಂಬ ಸೂರ್ಯನು ಸ್ವಸ್ಥತೆಯನ್ನುಂಟುಮಾಡುವ ಕಿರಣಗಳುಳ್ಳವನಾಗಿ ಮೂಡುವನು."(ಮಲಾಕಿ.4:2).

# 99. ಬಡತನ ನೀಗುವದು ಬಂಜರು ಭೂಮಿ ಫಲವತ್ತಾಗುವದು!

1. "ಅರಣ್ಯವೂ ಮರುಭೂಮಿಯೂ ಆನಂದಿಸುವವು; ಒಣ ನೆಲವು ಹರ್ಷಿಸಿ ತಾವರೆಯಂತೆ ಕಳಕಳಿಸುವದು." (ಯೆಶಾ.35:1).

2. "ಯೆಹೋವನು ನಿಮ್ಮನ್ನು ನಿತ್ಯವೂ ನಡಿಸುತ್ತಾ ಮರುಭೂಮಿ ಯಲ್ಲಿಯೂ ನಿಮ್ಮ ಆತ್ಮವನ್ನು ತೃಪ್ತಿಗೊಳಿಸಿ ನಿಮ್ಮ ಎಲುಬು ಗಳನ್ನು ಸಸಾರಮಾಡುವನು." (ಯೆಶಾ.58:11).

3. "ಬತ್ತಿದ ಭೂಮಿಯಲ್ಲಿ ಮಳೆಗರೆದು ಒಣ ನೆಲದಲ್ಲಿ ಕಾಲುವೆ ಹರಿಸುವೆನು." (ಯೆಶಾ.44:3).

4. "ಹೊಲಗಳನ್ನು ಬಿತ್ತಿ ದ್ರಾಕ್ಷಾಲತೆಗಳನ್ನು ನೆಟ್ಟು, ಆದಾಯ ವನ್ನು ಕೂಡಿಸಿಕೊಂಡರು. ಆತನು ಆಶೀರ್ವದಿಸಿದ್ದರಿಂದ ಅವರು ಬಹಳವಾಗಿ ಹೆಚ್ಚಿದರು." (ಕೀರ್ತ.107:37,38).

5. "ಇದರ ಆದಾಯವನ್ನು ಆಶೀರ್ವದಿಸುವೆನು. ಇಲ್ಲಿಯ ಬಡವ ರನ್ನು ಆಹಾರದಿಂದ ತೃಪ್ತಿಗೊಳಿಸುವೆನು. " (ಕೀರ್ತ.132:15).

6. "ಅಂಜೂರದ ಮರವನ್ನು ಕಾಯುವವನು ಅದರ ಫಲವನ್ನು ತಿನ್ನುವನು. ಯಜಮಾನನ ಮಾತಿಗೆ ಕಾಯುವವನು ಮಾನವನ್ನನುಭವಿಸುವನು." (ಜ್ಞಾನೋ.27:18).

7. "ಸ್ವರ್ಗಧಾನ್ಯವಾದ ಮನ್ನವನ್ನು ಅವರಿಗೋಸ್ಕರ ಸುರಿಸಿ ಉಣ್ಣಲಿಕ್ಕೆ ಕೊಟ್ಟನು. ಅವರಲ್ಲಿ ಪ್ರತಿಯೊಬ್ಬನೂ ದೇವ ದೂತರ ಆಹಾರವನ್ನು ಭುಜಿಸಿದರು." (ಕೀರ್ತ.78:24,25).

8. "ಒಬ್ಬನು ತನ್ನ ಧನವನ್ನು ಚೆಲ್ಲಿದರೂ ಅವನಿಗೆ ವೃದ್ಧಿ; ಮತ್ತೊಬ್ಬನು ನ್ಯಾಯವಾದದ್ದನ್ನು ಬಿಗಿಹಿಡಿದರೂ ಅವನಿಗೆ ಬಡತನ." (ಜ್ಞಾನೋ.11:24).

9. "ಉನ್ನತಲೋಕದಿಂದ ದಿವ್ಯಾತ್ಮಧಾರೆಯು ನಮ್ಮ ಮೇಲೆ ಸುರಿಸಲ್ಪಡುವದು. ಆಗ ಅರಣ್ಯವು ತೋಟವಾಗುವದು." (ಯೆಶಾ.32:15).

10."ನನ್ನ ಆಲಯವು ಆಹಾರ ಶೂನ್ಯವಾಗದಂತೆ ನೀವು ದಶಮಾಂಶ ಯಾವತ್ತನ್ನೂ ಬಂಡಾರಕ್ಕೆ ತೆಗೆದುಕೊಂಡು ಬನ್ನಿರಿ. ನಾನು ಪರಲೋಕದ ಧ್ವಾರಗಳನ್ನು ತೆರೆದು ನಿಮ್ಮಲ್ಲಿ ಸ್ಥಳ ಹಿಡಿಯಲಾರದಷ್ಟು ಸುವರಗಳನ್ನು ಸುರಿಸುವನೋ ಇಲ್ಲವೋ ನನ್ನನ್ನು ಹೀಗೆ ಪರೀಕ್ಷಿಸಿರಿ." (ಮಲಾ.3:10).

## 100. ಹೊಗಳಿಕೆ!

1. "ನಾನು ನಿರ್ಮಿಸಿದ ಬೇರೆ ಎಲ್ಲಾ ಜನಾಂಗಗಳಿಗಿಂತಲೂ ಇವರಿಗೆ ಹೆಚ್ಚಾದ ಕೀರ್ತಿಘನಮಾನಗಳನ್ನು ಉಂಟುಮಾಡುವೆನು." (ಧರ್ಮೋ.26:19).

2. "ಆತನೊಬ್ಬನೇ ನಿಮ್ಮ ಸ್ತೋತ್ರಕ್ಕೆ ಪಾತ್ರನು." (ಧರ್ಮೋ.10:21).

3. "ಆತನ ಸ್ತುತಿಯು ನಿರಂತರವಾದದ್ದು." (ಕೀರ್ತನೆ.111.10).

4. "ಬುದ್ಧಿವಂತನನ್ನು ಅವನ ಬುದ್ಧಿಗೆ ತಕ್ಕಂತೆ ಹೊಗಳುವರು. ವಕ್ರ ಬುದ್ಧಿಯುಳ್ಳವನನ್ನು ತಿರಸ್ಕರಿಸುವರು." (ಜ್ಞಾನೋ.12:8).

5. "ಒಳ್ಳೇದನ್ನು ಮಾಡು ಆಗ ಆ ಅಧಿಕಾರಿಯಿಂದಲೇ ನಿನಗೆ ಹೊಗಳಿಕೆಯುಂಟಾಗುವದು." (ರೋಮಾ.13:3).

6. "ಕತ್ತಲೆಯಲ್ಲಿರುವ ಗುಪ್ತಕಾರ್ಯಗಳನ್ನು ಬೆಳಕಿಗೆ ತರುವನು. ಹೃದಯದ ಯೋಚನೆಗಳನ್ನು ಪ್ರತ್ಯಕ್ಷಪಡಿಸುವೆನು. ಆ ಕಾಲದಲ್ಲಿ ಪ್ರತಿಯೊಬ್ಬನಿಗೆ ಬರತಕ್ಕ ಹೊಗಳಿಕೆಯು ದೇವರಿಂದ ಬರುವದು." (1 ಕೊರಿ.4:5).

7. "ಜನರು ಪಾರಂಪರ್ಯವಾಗಿ ನಿನ್ನ ಕೃತ್ಯಗಳನ್ನು ಹೊಗಳುವರು; ನಿನ್ನ ಮಹತ್ಕಾರ್ಯಗಳನ್ನು ವರ್ಣಿಸುವರು." (ಕೀರ್ತ.145:4).

8. "ಭಂಗಾರಕ್ಕಿಂತಲೂ ಅಮೂಲ್ಯವಾಗಿರುವ ನಿಮ್ಮ ನಂಬಿಕೆಯು ಈ ಕಷ್ಟಗಳಿಂದ ಶೋಧಿತವಾಗಿ ಯೇಸು ಕ್ರಿಸ್ತನು ಪ್ರತ್ಯಕ್ಷನಾಗು ವಾಗ ನಿಮಗೆ ಕೀರ್ತಿ ಪ್ರಭಾವ ಮಾನಗಳನ್ನು ಉಂಟು ಮಾಡು ವದು." (1 ಪೇತ್ರ.1:7).

9. "ತನ್ನನ್ನು ತಾನೇ ಹೊಗಳಿಕೊಳ್ಳುವವನು ಯೋಗ್ಯನಲ್ಲ; ಕರ್ತನು ಯಾರನ್ನು ಹೊಗಳುತ್ತಾನೋ ಅವನೇ ಯೋಗ್ಯನು." (2 ಕೊರಿ.10:18).

10. "ದೇವರೇ, ನಿನ್ನ ನಾಮದ ಘನತೆಗೆ ತಕ್ಕಂತೆಯೇ ಲೋಕವೆಲ್ಲಾ ನಿನ್ನನ್ನು ಹೊಗಳುವದು." (ಕೀರ್ತ.48:10).

ಮನತೆರೆದು ನಿಮ್ಮೊಂದಿಗೆ...

ಈ ಪುಸ್ತಕದ ಮೂಲಕ ನಿಮ್ಮನ್ನು ಸಂಧಿಸಲು ಕೃಪೆ ನೀಡಿದ ದೇವರಿಗೆ ಸ್ತೋತ್ರ ಸಲ್ಲಿಸುತ್ತೇನೆ. ಕೃಪೆಯೂ ಸಮಾಧಾನವೂ ನಿಮ್ಮಲ್ಲಿ ಹೆಚ್ಚಲಿ. ಸತ್ಯವೇದವನ್ನು ಒಂದು ವಾಗ್ದಾನದ ಪುಸ್ತಕ ಎಂದು ನಾವು ಕರೆಯಬಹುದು. ಅದರಲ್ಲಿ ಹೆಚ್ಚುಕಡಿಮೆ ಮೂವತ್ತು ಸಾವಿರ ವಾಗ್ದಾನಗಳಿವೆ ಎಂದು ಗುರುತಿಸಿದ್ದಾರೆ.

ಈ ಪುಸ್ತಕದಲ್ಲಿ ಸಾವಿರ ವಾಗ್ದಾನಗಳನ್ನು ನಿಮ್ಮ ಪ್ರಯೋಜನಕ್ಕಾಗಿ ಆರಿಸಿಕೊಂಡಿದ್ದೇವೆ. ವಾಗ್ದಾನಗಳನ್ನು ಹಿಡಿದು ಪ್ರಾರ್ಥಿಸಲು ಇವು ಸಹಾಯಕವಾಗಿವೆ.

ಈ ಪುಸ್ತಕವನ್ನು ಪ್ರಕಟಿಸಲು ಉದಾರವಾಗಿ ಸಹಾಯ ಮಾಡಲು ಮುಂದೆ ಬಂದಂಥ

**Mrs. Shantha David**

in memory of her husband

Late **Mr. G. DAVID**

& her son

Late **Mr. SWAROP ANAND**

ಅವರಿಗಾಗಿ ಕರ್ತನನ್ನು ಸ್ತುತಿಸುತ್ತೇನೆ. ಕರ್ತನು ಚೀಯೋನಿನಿಂದ ಅವರನ್ನು ಆಶೀರ್ವದಿಸಲಿ.

ಜೆ. ಸ್ಯಾಮ್ ಜೆಬದುರೈ.

## ಓದಿರುವಿರಾ?

| | | |
|---|---|---|
| 58. | ಯಾರು? ಯಾರು? ಯಾರು? | 6.00 |
| 59. | ಉನ್ನತದಲ್ಲಿನ ಮಹೋನ್ನತ ಸ್ಥಳ | 6.00 |
| 60. | ವಾಗ್ದಾನಗಳ ದೇವರು | 6.0 |
| 61. | ಸೋಲಾ? ಗೆಲವಾ? | 6.0 |
| 62. | ಬೀಗದ ಕೈ | 6.00 |
| 63. | ಇಲ್ಲಿಗೆ ಏರಿ ಬಾ | 6.00 |
| 64. | ಅನುದಿನವೂ ಯೇಸುವಿನೊಂದಿಗೆ | 6.00 |
| 65. | ಶೋಧನೆಗಳಲ್ಲಿ ಯೇಸುವಿನ ಜಯ | 6.00 |
| 66. | ಯೋಬನ ಶೋಧನೆ | 6.00 |
| 67. | ಶೋಧನೆಯಲ್ಲಿ ತಿಳಿಯಬೇಕಾದ 4 ಸತ್ಯಗಳು | 6.00 |
| 68. | ಪುನರುತ್ಥಾನದ ಶಕ್ತಿ | 6.00 |
| 69. | ರಾಜಾಧಿರಾಜ ಯೇಸುಕ್ರಿಸ್ತನಿಗೆ ಒಂದು ಸಾಕ್ಷಿ | 6.00 |
| 70. | ಅಡಚಣೆಗಳನ್ನು ಒಡೆಯುವಾತನು | 6.00 |
| 71. | ಸ್ಮಿತ್ ವಿಗಲ್ಸವರ್ತ್ | 6.00 |
| 72. | ಸಂತೈಸುವ ದೇವರು | 6.00 |
| 73. | ಆತ್ಮಗಳನ್ನು ವಿವೇಚಿಸುವದು ಹೇಗೆ? | 6.00 |
| 74. | ಹನೋಕನು | 6.00 |
| 75. | ಕಲ್ವಾರಿಯ ದೊಡ್ಡ ಹನಿಗಳು | 6.00 |
| 76. | ಬಿರುದನ್ನು ಪಡೆದುಕೊಳ್ಳಲು | 6.0 |
| 77. | ಯಜ್ಞದ ಒಡಂಬಡಿಕೆ | 6.0 |
| 78. | ಪ್ರಾರ್ಥನೆಯೇ ಪ್ರಾಣದ ನಾಡಿ | 6. |
| 79. | ಅಪರಿಚಿತ ವ್ಯಕ್ತಿಗಳು | 6. |
| 80. | ಇಸ್ರಾಯೇಲೇ ನೀನು ಧನ್ಯನು | 6. |
| 81. | ಸಿದ್ಧನಾಗಿರು, ಸಿದ್ಧಪಡಿಸು | 6.0 |
| 82. | ದೀನತೆಯ ಆಶೀರ್ವಾದಗಳು | 6.0 |
| 83. | ಅಗ್ನಿಯ ಅನುಭವಗಳು | 6.00 |
| 84. | ಸೇವಕರೊಂದಿಗೆ ಮನತೆರೆದು | 6.00 |
| 85. | ದಿಗ್ಭ್ರಮೆಗೊಳ್ಳದಿರು ಕಳವಳಗೊಳ್ಳದಿರು | 6.00 |
| 86. | ಒಂದು ಸಾವಿರ ವಾಗ್ದಾನಗಳು | 10.00 |
| 87. | ಅನುದಿನದ ಆಹಾರ(ಮಾಸಿಕ) | 60.00 |

# ಆಧ್ಯಾತ್ಮಿಕ ಪುಸ್ತಕಗಳು



ಆತ್ಮೀಕ ಜೀವಿತದಲ್ಲಿ ಬೆಳೆಯಲು ಮತ್ತು ಆತ್ಮನ ಬಲವನ್ನು ಹೊಂದಿಕೊಳ್ಳಲು ಆಧ್ಯಾತ್ಮಿಕ ಪುಸ್ತಕಗಳು ಅತ್ಯವಶ್ಯ

ಸಹೋದರ ಸ್ಯಾಮ್ ಜೆಬದುರೈರವರು, ಸುಮಾರು 700ಕ್ಕಿಂತ ಹೆಚ್ಚು ತಮಿಳು ಪುಸ್ತಕಗಳನ್ನು ಬರೆದಿರುವರು.

ಹದಿನಾರು ವರುಷಗಳ ಕಾಲ ಸರ್ಕಾರಿ ಸೇವೆಯಲ್ಲಿ ತಮ್ಮ ಜೀವಿತವನ್ನು ಕಳೆದ ನಂತರ, ತಮ್ಮ ಉದ್ಯೋಗಕ್ಕೆ ರಾಜೆನಾಮೆ ನೀಡಿ, 1985ರಿಂದ ಇತ್ತೀಚೆಗೆ ಅವರು ಪೂರ್ಣಾವಧಿ ಸೇವೆಯಲ್ಲಿ ತಮ್ಮನ್ನು ಕರ್ತನಿಗೆ ಮುಡುಪಾಗಿಟ್ಟಿದ್ದಾರೆ. ಈ ಸೇವೆಯಲ್ಲಿ ಸಹೋದರ ಸ್ಯಾಮ್ ಜೆಬದುರೈರವರು ದೇವರ ವಾಕ್ಯವನ್ನು ಸಾರುವುದರ ಮೂಲಕ ಮತ್ತು ಬರವಣಿಗೆಯ ಮೂಲಕ ಸಾವಿರಾರು ಜನರನ್ನು ಕರ್ತನ ಬಳಿಗೆ ನಡೆಸಿದ್ದಾರೆ.

ಈ ಆಧ್ಯಾತ್ಮೀಕ ಪುಸ್ತಕಗಳಿಗೆ ಪ್ರೋತ್ಸಾಹ ನೀಡಿ, ಕನ್ನಡ ಭಾಷೆಯಲ್ಲಿ ಅವರ ಅನೇಕ ಪುಸ್ತಕಗಳು ಭಾಷಾಂತರವಾಗಿ ಹೊರ ಬರುವಂತೆ ತೀವ್ರವಾಗಿ ಕರ್ತನನ್ನು ಪ್ರಾರ್ಥಿಸಿರಿ.

ಈ ಪುಸ್ತಕಗಳಿಗಾಗಿಯೂ, ಎಂ.ಪಿ.3., ಸಿ.ಡಿ., ವಿ.ಸಿ.ಡಿ., ಗಳಿಗಾಗಿಯೂ ಮತ್ತು ನಮ್ಮಲ್ಲಿ ಪ್ರಕಟವಾಗುವ ಮಾಸಪತ್ರಿಕೆ "ಅನುದಿನದ ಆಹಾರ" ಎಂಬ ಕನ್ನಡ ದೈನಿಕ ಬರಹವನ್ನು ಹೊಂದಲು ನೀವು ಬಯಸುವುದಾದರೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ. ಕರ್ತನು ನಿಮ್ಮನ್ನು ಆಶೀರ್ವದಿಸಲಿ.

**Selvin Christopher George**

24th 'F' Cross, Ejipura, Viveknagar, Bangalore - 560 047.

Ph: 080 - 25712448